KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೧೩, ೨೦೦೬ (ಚೈತ್ರ ೨೩, ಶಕ ವರ್ಷ ೧೯೨೮) | ಸಂಚಿಕೆ ೧೫ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆಯ (ಐಡೆಕ್) ಯೋಜನಾ ಅಭಿವೃದ್ಧಿ ನಿಧಿ (PDF) ಹಾಗೂ ಯೋಜನಾ ಬಂಡವಾಳ ನಿಧಿ (PIF) ಗಳಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ.ಮೂಅಇ 2 ರಾಅವಿ 2001, ದಿನಾಂಕ 20.3.2001.
2. ಸರ್ಕಾರದ ಆದೇಶ ಸಂಖ್ಯೆ.ಮೂಅಇ 124 ಮೂಇವಿ 2000, ದಿನಾಂಕ 6.10.2001.
3. ಸರ್ಕಾರದ ಆದೇಶ ಸಂಖ್ಯೆ.ಮೂಅಇ 81 ಮೂಇವಿ 2002, ದಿನಾಂಕ 6.7.2002.
4. ಸರ್ಕಾರದ ಆದೇಶ ಸಂಖ್ಯೆ.ಮೂಅಇ 148 ಮೂಇವಿ 2002, ದಿನಾಂಕ 22.10.2002.
5. ಸರ್ಕಾರದ ಆದೇಶ ಸಂಖ್ಯೆ.ಮೂಅಇ 148 ಮೂಇವಿ 2002, ದಿನಾಂಕ 21.2.2003.
6. ಸರ್ಕಾರದ ಆದೇಶ ಸಂಖ್ಯೆ.ಮೂಅಇ 148 ಮೂಇವಿ 2002, ದಿನಾಂಕ 31.3.2003.
7. ಸರ್ಕಾರದ ಆದೇಶ ಸಂಖ್ಯೆ.ಮೂಅಇ 29 ಮೂಇವಿ 2002 (P), ದಿನಾಂಕ 4.11.2003.
8. ಸರ್ಕಾರದ ಆದೇಶ ಸಂಖ್ಯೆ.ಮೂಅಇ 63 ರಾರಾಹೆ 2003, ದಿನಾಂಕ 14.9.2004.
9. ವ್ಯವಸ್ಥಾಪಕ ನಿರ್ದೇಶಕರು ಹಾಗೂ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಐಡೆಕ್ ಇವರ ದಿನಾಂಕ 1.6.2005, 25.8.2005, 19.9.2005, 30.11.2005, 21.12.2005 ಹಾಗೂ 6.2.2006 ರ ಪತ್ರಗಳು.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ 1ರಿಂದ 8ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳ ಡಿಯಲ್ಲಿ ಕರ್ನಾಟಕ ಸರ್ಕಾರವು ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆ (ಐಡೆಕ್)ಗೆ ಷೇರುದಾರರ ಒಪ್ಪಂದದಲ್ಲಿ ಅವಕಾಶವಿರುವಂತೆ ಐಡೆಕ್‌ನ ಯೋಜನಾ ಅಭಿವೃದ್ಧಿ ಹಾಗೂ ಯೋಜನಾ ಬಂಡವಾಳ ನಿಧಿಗಳಿಗೆ (PDF & PIF) ಮೂಲಸೌಲಭ್ಯ ಉಪಕ್ರಮ ನಿಧಿ (IIF) ಯಿಂದ ರಾಜ್ಯದಲ್ಲಿನ ಆಯ್ದ ಹಾಗೂ ಐಡೆಕ್‌ನ ಕಾರ್ಯಕಾರಿ ಸಮಿತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಿಂದ ಅನುಮೋದನೆಗೊಂಡ ರಾಜ್ಯದ ಮೂಲಸೌಲಭ್ಯ ಯೋಜನೆಗಳ ಅಭಿವೃದ್ಧಿಗಾಗಿ ಐಡೆಕ್ ಸಂಸ್ಥೆಯು ಭಾಗವಹಿಸಲು ಸರ್ಕಾರವು ಇದುವರೆವಿಗೂ ಒಟ್ಟಾರೆ ರೂ.26.85 ಕೋಟಿಗಳ ಅನುದಾನವನ್ನು ಆಯವ್ಯಯದಿಂದ ಬಿಡುಗಡೆ ಮಾಡಿರುತ್ತದೆ.

2. ಕ್ರಮ ಸಂಖ್ಯೆ.9ರಲ್ಲಿ ಓದಲಾಗಿರುವ ವ್ಯವಸ್ಥಾಪಕ ನಿರ್ದೇಶಕರು ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಐಡೆಕ್ ಇವರ ಪತ್ರಗಳಲ್ಲಿ ಪ್ರಸ್ತುತ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ.50.00 ಲಕ್ಷಗಳ ಒದಗಣೆಯನ್ನು ಐಡೆಕ್ ಸಂಸ್ಥೆಗೆ ರಾಜ್ಯದಲ್ಲಿನ ಮುಂದುವರಿದ ಮೂಲಸೌಲಭ್ಯ ಯೋಜನೆಗಳಲ್ಲಿ ತೊಡಗಿಸಲು ಅತ್ಯಗತ್ಯವಾಗಿ ಬೇಕಾಗಿರುತ್ತದೆಂದು ಹಾಗೂ ತಾವು ಈಗಾಗಲೇ ಯೋಜನಾ ಅಭಿವೃದ್ಧಿ ನಿಧಿಯಿಂದ ತೊಡಗಿಸಲಾಗಿದ್ದ ಬೆಂಗಳೂರು Landfill ಹಾಗೂ ಸಂಡೂರು ಬೈಪಾಸ್ ಯೋಜನೆಗಳ ಪ್ರಾರಂಭಿಕ ಮೊತ್ತಗಳಾದ ರೂ.65.00 ಲಕ್ಷಗಳನ್ನು ಹಿಂತಿರುಗಿ ಪಡೆದಿರುವುದಾಗಿಯೂ, ಇದಲ್ಲದೆ, ಕಲಾಸಿಪಾಳ್ಯ ಬಸ್ ನಿಲ್ದಾಣದ ಯೋಜನೆಯಿಂದಲೂ ಕೂಡ ಬಿಡ್ ಪ್ರಕ್ರಿಯೆ ಇಷ್ಟರಲ್ಲಿಯೇ ಪೂರ್ಣಗೊಳ್ಳುವುದಿದ್ದು, ಬಂಡವಾಳ ಅಭಿವೃದ್ಧಿ ನಿಧಿಗೆ ಇದರಿಂದಲೂ ಹಣ ಹಾಗೂ ಐಡೆಕ್ ಸಂಸ್ಥೆಯ ಶುಲ್ಕಗಳು ಮರಳಿ ನಿಧಿಗೆ ಬರುವ ಸಂಭವವಿದ್ದು, ತಾವು ತೊಡಗಿಸಲಾಗಿದ್ದ ಪ್ರಾರಂಭಿಕ ಬಂಡವಾಳದ ಈ ರೀತಿ ಯೋಜನಾ ಬಂಡವಾಳ ನಿಧಿಯು (PIF) ಸ್ವಯಂ ಅವಲಂಬಿತ ನಿಧಿಯಾಗಿ (Self sustaining) ರೂಪುಗೊಳ್ಳುತ್ತಲಿದೆ ಎಂದು ತಿಳಿಸಿರುತ್ತಾರೆ. ಈಗ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಆಯವ್ಯಯದಲ್ಲಿ ಮಾಡಿರುವ ರೂ.50.00 ಲಕ್ಷಗಳ ಒದಗಣೆಯನ್ನು ಶೀಘ್ರವಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

3. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 74 ರಾರಾಹೆ 2005, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2006**

ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆಯು ರಾಜ್ಯದ ಅನುಮೋದಿತ ಮೂಲಸೌಲಭ್ಯ ಯೋಜನೆಗಳ ಅಭಿವೃದ್ಧಿ ವೆಚ್ಚ ಹಾಗೂ ಬಂಡವಾಳ ವೆಚ್ಚಗಳನ್ನು ತೂಗಿಸಲು ಅನುಕೂಲವಾಗುವಂತೆ ರೂ.50.00 ಲಕ್ಷಗಳನ್ನು (ರೂ.ಐವತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿಯನ್ನು ನೀಡಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 5465-01-190-1-01-211 ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆ ನಿಯಮಿತ (ಐಡೆಕ್) ಬಂಡವಾಳ (ಯೋಜನೆ)- 2005-06 ಇದರಿಂದ ಭರಿಸತಕ್ಕದ್ದು.

3. ವ್ಯವಸ್ಥಾಪಕ ನಿರ್ದೇಶಕರು, ಐಡೆಕ್, ಬೆಂಗಳೂರು ಇವರು Payees ರಸೀದಿಯ ಮೂಲಕ ಸರ್ಕಾರದ ಈ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವನ್ನು ಪಡೆದು ಈ ಮೊತ್ತವನ್ನು ಪಡೆದುಕೊಳ್ಳಲು ಅಧಿಕಾರವನ್ನು ನೀಡಲಾಗಿದೆ.

4. ಆರ್ಥಿಕ ಇಲಾಖೆಯು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ FD 1 TFP 96, ದಿನಾಂಕ: 10.7.1996 ಹಾಗೂ FD 12 TFP 2000 ದಿನಾಂಕ 15.11.2000 ಇವುಗಳ ಮುಖೇನ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಚಲಾಯಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಬಿ. ರೇಣುಕಾಪ್ರಸಾದ್**
ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

ಪಿ.ಆರ್. 379

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಪ್ರದೇಶಕ್ಕೆ ತಯಾರಿಸಿರುವ ರಚನಾ ನಕ್ಷೆಯಲ್ಲಿ IZ-6ರ ವಲಯದಲ್ಲಿ ಬರುವ ಆನೇಕಲ್ ತಾಲ್ಲೂಕು, ಬಿದಿರುಗುಪ್ಪೆ ಮತ್ತು ಅರೆನೂರು ಗ್ರಾಮಗಳನ್ನು APZ-5ಕ್ಕೆ ಸೇರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ನಅಇ 51 ಬಿಎಂಆರ್ 2002, ದಿನಾಂಕ: 21.9.2005.
2. ಸರ್ಕಾರಿ ಆದೇಶ ಸಂಖ್ಯೆ: ನಅಇ 51 ಬಿಎಂಆರ್ 2002, ದಿನಾಂಕ: 25.2.2006.
3. ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರಿಂದ ಸ್ವೀಕರಿಸಿರುವ ಪತ್ರದ ಸಂಖ್ಯೆ:ಬಿಎಂಆರ್‌ಡಿಎ/ಎಲ್ಎಓ/151/2005-06 ದಿನಾಂಕ: 20.1.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 21.9.2005ರ ಆದೇಶದಲ್ಲಿ ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶದ ಯೋಜಿತ ಬೆಳವಣಿಗಾಗಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಸಿದ್ದಪಡಿಸಿರುವ ರಚನಾ ನಕ್ಷೆಗೆ ಕೆಲವು ಅಂಶಗಳನ್ನು ಅಳವಡಿಸಿ ಮಂಜೂರಾತಿಯನ್ನು ನೀಡಿತು.

ಮೇಲೆ (2)ರಲ್ಲಿ ಓದಲಾದ ದಿನಾಂಕ:25.2.2006ರ ಆದೇಶದಲ್ಲಿ ಅಕ್ಕಿ ಗಿರಣಿಗಳು ಮತ್ತು ಕೃಷಿ ಉತ್ಪಾದನಾ ಸಂಸ್ಕರಣೆ ಹಾಗೂ ಸಂಬಂಧಿತ ಘಟಕಗಳನ್ನು (ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆಗ್ರೋ ಫುಡ್ ಪ್ರೊಸೆಸಿಂಗ್ (Agro Food Procesing) ಕೈಗಾರಿಕಾ ನೀತಿ, 1999ರಲ್ಲಿ ವ್ಯಾಖ್ಯಾಸಿರುವಂತೆ) ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಪ್ರಕರಣಗಳೆಂದು ಪರಿಗಣಿಸಿ ಅನುಮತಿಸಲು ಆದೇಶಿಸಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ:20.1.2006ರ ಪತ್ರದಲ್ಲಿ ಮಹಾನಗರ ಆಯುಕ್ತರ, ಬೆಂಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರು ಕರಡು ರಚನಾ ನಕ್ಷೆಗೆ ಅಂತಿಮವಾಗಿ ಅನುಮೋದನೆ ನೀಡುವಾಗ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಮತ್ತು ಬಿದಿರುಗುಪ್ಪೆ ಗ್ರಾಮಗಳ ಸುತ್ತಲೂ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದಿತ ವಸತಿ ವಿನ್ಯಾಸಗಳಿರುವುದರಿಂದ ಪ್ರಶ್ನಿತ ಗ್ರಾಮಗಳನ್ನು ದ್ವೀಪದಂತೆ ಹೊರತುಪಡಿಸುವ ಬದಲುAPZ-5 ರ ಪಟ್ಟಿಗೆ ಸೇರಿಸಲು ಸೂಕ್ತ ಎಂದು ಕೋರಿರುತ್ತಾರೆ.

ಮಹಾನಗರ ಆಯುಕ್ತರ ಪ್ರಸ್ತಾವನೆಯನ್ನು ಪರಿಗಣಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 196 ಬಿಎಂಆರ್ 2005, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಅರೆನೂರು ಮತ್ತು ಬಿದಿರುಗುಪ್ಪೆ ಗ್ರಾಮಗಳನ್ನು ಹಾಲಿ ಇರುವ IZ-6ರ ವಲಯದಿಂದ ಬೇರ್ಪಡಿಸಿ APZ-5ರ ವಲಯಕ್ಕೆ ಸೇರಿಸಿ ಸರ್ಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವ್ಹಿ.ಆರ್. ಇಲಕಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 381

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶ್ರೀ ಎಂ.ಟಿ. ಕಾರಿಯಪ್ಪ, ವಕೀಲರು, ವಿರಾಜಪೇಟೆ, ಕೊಡಗು ಜಿಲ್ಲೆ ಇವರನ್ನು ವಿರಾಜಪೇಟೆ ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಪತ್ರ ಸಂಖ್ಯೆ ಲಾ 222 ಎಲ್‌ಸಿಎಲ್ 05 ದಿ:1.10.2005.
2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಡಗು ರವರ ಪತ್ರ ದಿನಾಂಕ:8.12.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 1.10.2005ರ ಸರ್ಕಾರಿ ಪತ್ರದಲ್ಲಿ ಶ್ರೀ ಎಸ್.ಜಿ. ಮಣಿ, ನೋಟರಿ, ವಿರಾಜಪೇಟೆ ಇವರ ನಿಧನದಿಂದ ತೆರವಾದ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಡಗು ಇವರನ್ನು ಕೋರಲಾಗಿತ್ತು.

ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ:8.12.2005 ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಕೊಡಗು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 222 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಂ.ಟಿ. ಕಾರಿಯಪ್ಪ, ವಕೀಲರು ಮ್ಯಾಟ್ಸ್ ಎಸ್ಟೇಟ್, ಶ್ರೀಮಂಗಲ ಅಂಚೆ, ವಿರಾಜಪೇಟೆ ಕೊಡಗು ಜಿಲ್ಲೆ, ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ವಿರಾಜಪೇಟೆ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎ. ಬಾಬು ರವೀಂದ್ರನಾಥ್ ಪಟೇಲ್**

ಪಿ.ಆರ್. 389

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2) (ಪ್ರ),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಎಂ. ಚಂದ್ರಶೇಖರ್, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ಪೊನ್ನಂಪೇಟೆ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 41 ವಿಸೇಬಿ 96 ಬೆಂಗಳೂರು ದಿನಾಂಕ: 21.4.1998.
2. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು - ಅರ್ಜಿ ಸಂಖ್ಯೆ: 2551/98ರ ಆದೇಶ ದಿನಾಂಕ: 1.6.2005.
3. 2ನೇ ಕಾರಣ ಕೇಳುವ ನೋಟೀಸಿಗೆ ಸಲ್ಲಿಸಿರುವ ರಕ್ಷಣಾ ಹೇಳಿಕೆ ದಿನಾಂಕ 22.4.1997.

**ಪ್ರಸ್ತಾವನೆ:**

ಶ್ರೀ ಎಂ. ಚಂದ್ರಶೇಖರ, ಸಹಾಯಕ ಕೃಷಿ ನಿರ್ದೇಶಕರು, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ ಪೊನ್ನಂಪೇಟೆ ಹಾಗೂ ಇತರ ಇಬ್ಬರು ನೌಕರರ ವಿರುದ್ಧ ಕರ್ನಾಟಕ ಉಪ ಲೋಕಾಯುಕ್ತರು ವಿಚಾರಣೆ ನಡೆಸಿ, ಸರ್ಕಾರಕ್ಕೆ ಸಲ್ಲಿಸಿದ ವರದಿಯಲ್ಲಿ ರೂ.56,202-35 ಮೊತ್ತ ನಷ್ಟಕ್ಕೆ ಆಪಾದಿತರಲ್ಲೊಬ್ಬರಾದ ಶ್ರೀಮತಿ ಪೂವಮ್ಮ ಇವರೇ ಕಾರಣರಾಗಿರುವುದಾಗಿ ತಿಳಿಸಿದ್ದು, ಕ್ಷೇತ್ರಾಭಿವೃದ್ಧಿ ಅಧಿಕಾರಿ ರವರು ಸದರಿ ಕ್ಯಾಷಿಯರ್ ರವರ ಕರ್ತವ್ಯ ನಿರ್ವಹಣೆ ಬಗ್ಗೆ ಸರಿಯಾಗಿ ಮೇಲುಸ್ತುವಾರಿ ನಡೆಸದೆ ಲೋಪವೆಸಗಿರುವ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯಪಟ್ಟಿದ್ದರು. ಅದರಂತೆ ಶ್ರೀಮತಿ ಪೂವಮ್ಮ ರವರಿಂದ ಮೇಲ್ಕಂಡ ಮೊತ್ತ ವಸೂಲಿ ಮಾಡುವ ಹಾಗೂ ಅವರನ್ನು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲಾಗಿದೆ. ಮತ್ತು ಶ್ರೀ ಚಂದ್ರಶೇಖರ್ ಇವರ ವೇತನ ಶ್ರೇಣಿ ಕನಿಷ್ಠ ಮಟ್ಟಕ್ಕೆ ಐದು ವರ್ಷಗಳ ಕಾಲ ಜಾರಿಯಲ್ಲಿರುವಂತೆ ಇಳಿಸುವ ದಂಡನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 20.4.1998 ರಂದು ವಿಧಿಸಲಾಗಿತ್ತು.

ಶ್ರೀ ಎಂ. ಚಂದ್ರಶೇಖರ್, ಸಹಾಯಕ ಕೃಷಿ ನಿರ್ದೇಶಕರು, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ಪೊನ್ನಂಪೇಟೆ ಇವರು ಮೇಲೆ ಓದಲಾದ (1)ರ ಸರ್ಕಾರದ ಆದೇಶದ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 2551/98ರಲ್ಲಿ ಪ್ರಶ್ನಿಸಿದ್ದು, ನ್ಯಾಯ ಮಂಡಳಿಯ ಓದಲಾದ ಕ್ರಮ ಸಂಖ್ಯೆ (2)ರ ಆದೇಶ ದಿನಾಂಕ: 1.6.2005ರ ಆದೇಶದಲ್ಲಿ ತಿಳಿಸಿರುವಂತೆ ಶಿಸ್ತು ಪ್ರಾಧಿಕಾರವು ಆಪಾದಿತ ಅಧಿಕಾರಿಯಾದ ಶ್ರೀ ಎಂ. ಚಂದ್ರಶೇಖರ್, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ತಾಲ್ಲೂಕ ಪಂಚಾಯತ್, ಪೊನ್ನಂಪೇಟೆ ರವರು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ವಿವರಣೆಯನ್ನು ಮರುಪರಿಶೀಲಿಸಿ, ನಿಯಮಾನುಸಾರ ಹೊಸದಾಗಿ, ಸರ್ಕಾರದ ಆದೇಶವನ್ನು ಹೊರಡಿಸಲು ನಿರ್ದೇಶನ ನೀಡಿರುತ್ತದೆ.

ಪ್ರಸ್ತುತ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಆದೇಶಿಸಿರುವಂತೆ ಅರ್ಜಿದಾರರಾದ ಶ್ರೀ ಚಂದ್ರಶೇಖರ್ ರವರು 2ನೇ ಕಾರಣ ಕೇಳುವ ನೋಟೀಸಿಗೆ ಸರ್ಕಾರಕ್ಕೆ ಸಲ್ಲಿಸಿರುವ ಓದಲಾದ (3)ರಲ್ಲಿಯ ಲಿಖಿತ ಹೇಳಿಕೆಯನ್ನು ಪುನರ್ ಪರಿಶೀಲಿಸಿ, ದಿನಾಂಕ: 21.4.1998ರ ಆದೇಶ ಪರಿಷ್ಕರಿಸಿ, ಅವರು 1998ರಲ್ಲಿ ಪಡೆಯುತ್ತಿದ್ದ ವೇತನ ಶ್ರೇಣಿಯ, ಕನಿಷ್ಠ ವೇತನ ಶ್ರೇಣಿಗೆ ಎರಡು ವರ್ಷಗಳ ಕಾಲ ಇಳಿಸಲು ನಿರ್ಣಯಿಸಲಾಗಿದೆ. ಅದರಂತೆ ಈ ಕೆಳಗಿನ ಆದೇಶ;

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 46 ವಿಸೇಬಿ 2005 (ಭಾ), ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅರ್ಜಿದಾರರಾದ ಶ್ರೀ ಎಂ. ಚಂದ್ರಶೇಖರ್, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ಪೊನ್ನಂಪೇಟೆ, ಇವರಿಗೆ ಸಂಬಂಧಿಸಿದಂತೆ ಮಾತ್ರ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 41 ವಿಸೇಬಿ 96 ಬೆಂಗಳೂರು ದಿನಾಂಕ: 21.4.1998ರಲ್ಲಿ, ದಂಡನೆ ವಿಧಿಸಿದ ಆದೇಶವನ್ನು ರದ್ದುಗೊಳಿಸಿದೆ. ಹಾಗೂ ಸದರಿ ಅಧಿಕಾರಿಯು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ರಕ್ಷಣಾ ಹೇಳಿಕೆಯನ್ನು ಮರು ಪರಿಶೀಲಿಸಿ, ಶ್ರೀ ಎಂ. ಚಂದ್ರಶೇಖರ್, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ಪೊನ್ನಂಪೇಟೆ (ಪ್ರಸ್ತುತ ಕೃಷಿ ಉಪ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ ಅರಕಲಗೂಡು, ಹಾಸನ ಜಿಲ್ಲೆ) ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ನಿಯಮ-8 ಅನ್ವಯ ಅವರು, ದಿನಾಂಕ 21.4.1998ರಲ್ಲಿ ಪಡೆಯುತ್ತಿದ್ದ ವೇತನ ಶ್ರೇಣಿಯ ಕನಿಷ್ಠ ವೇತನ ಶ್ರೇಣಿಗೆ 2 ವರ್ಷಗಳ ಕಾಲ ಇಳಿಸುವ ದಂಡನೆ ವಿಧಿಸಿದೆ. ಸದರಿ ದಂಡನೆಯು ದಿನಾಂಕ 21.4.1998 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರತಕ್ಕದ್ದು.

ಮೇಲ್ಕಂಡ ದಂಡನೆಯ ಅವಧಿಯಲ್ಲಿ ಈ ಅಧಿಕಾರಿಯ ಯಾವುದೇ ರೀತಿಯ ವೇತನ ಬಡ್ತಿಗೆ ಅರ್ಹರಿರುವುದಿಲ್ಲ, ಮತ್ತು ಸದರಿ ದಂಡನೆ ಅವಧಿ ಮುಕ್ತಾಯವಾದ ನಂತರ ಈ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ-59(i)(ಡಿ) ರನ್ವಯ, ಸಾಮಾನ್ಯ ಕ್ರಮದಲ್ಲಿ ಅವರಿಗೆ ವೇತನ ಇಳಿಕೆ ಆಗಿರದಿದ್ದರೆ, ಯಾವ ವೇತನವನ್ನು ಪಡೆಯಲು ಅರ್ಹರಿರುತ್ತಿದ್ದರೋ ಆ ವೇತನವನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಷಣ್ಮುಖ**

ಪಿ.ಆರ್. 390

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಲೆಕ್ಕಶೀರ್ಷಿಕೆ 2202-03-103-2-03(059) (ಯೋಜನೆ) ಯಿಂದ ಲೆಕ್ಕ ಶೀರ್ಷಿಕೆ 2202-03-103-2-01 (ಯೋಜನೆ) ಇತರೆ ಸರ್ಕಾರಿ ಕಾಲೇಜಿಗೆ ಪುನರ್ ವಿನಿಯೋಗ ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ:ಕಾಶಿಇ:50:ಆಯವ್ಯಯ:05-06 ದಿ:16.2.2006.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು ಕಾಲೇಜು ಶಿಕ್ಷಣ ಇಲಾಖೆ ಇವರ ಪತ್ರದಲ್ಲಿ 2005-06ನೇ ಸಾಲಿಗೆ ಲೆ.ಶಿ. 2202-03-103-2-01 ಯೋಜನೆಯಡಿಯಲ್ಲಿ ರೂ.150.00 ಲಕ್ಷಗಳನ್ನು ಯೋಜನೆ ಅಡಿಯಲ್ಲಿ ಬಿಡುಗಡೆ ಮಾಡಲಾಗಿದ್ದು ಇದರಲ್ಲಿ 11 ಜನ ಅಧೀಕ್ಷಕರ ವೇತನಕ್ಕಾಗಿ ರೂ.6,00,000/- ಲಕ್ಷಗಳ ಅನುದಾನ ಒದಗಿಸಲಾಗಿದ್ದು ಸದರಿ ಮೊತ್ತವನ್ನು ಏಪ್ರಿಲ್ 2005 ರಿಂದ ನವೆಂಬರ್ 2005ರ ವೇತನಕ್ಕಾಗಿ ಪೂರ್ಣವಾಗಿ ಬಳಸಲಾಗಿದ್ದು ಡಿಸೆಂಬರ್ 2005 ರಿಂದ ಫೆಬ್ರವರಿ 2005ರ ವೇತನ ಪಾವತಿಸಲು ಅನುದಾನ ಲಭ್ಯತೆ ಇರುವುದಿಲ್ಲ ಯೋಜನೆ ಅಡಿಯಲ್ಲಿ ಅನುದಾನದ ಉಳಿಕೆಯ ಲಭ್ಯತೆ ಇಲ್ಲದಿರುವುದರಿಂದ ವೇತನ ಪಾವತಿಸಲು ಸಾಧ್ಯವಾಗಿಲ್ಲ. ಆದುದರಿಂದ ವೇತನ ಪಾವತಿಯು ಅನಿವಾರ್ಯ ಪಾವತಿಗಳಾಗಿರುವುದರಿಂದ ಲೆ.ಶಿ.2202-03-103-2-03 (059) ಯೋಜನೆಯಿಂದ ಲೆ.ಶಿ.2202-03-103-2-01 (ಯೋಜನೆ) ಇತರೆ ಸರ್ಕಾರಿ ಕಾಲೇಜುಗಳಿಗೆ ಪುನರ್ ವಿನಿಯೋಗ ಮಾಡುವ ಬಗ್ಗೆ ಮೈಸೂರು ಮಹಿಳಾ ಸರ್ಕಾರಿ ಕಾಲೇಜಿಗೆ ವೇತನ ಬಟವಾಡೆ ಮಾಡಲು ಲೆ.ಶಿ. 2202-03-103-2-03(059)ಯೋಜನೆ ಅಡಿಯಲ್ಲಿ ರೂ.14,00,000/- ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು ಈ ಅನುದಾನದಲ್ಲಿ ಈ ಕಾಲೇಜಿಗೆ ಈ ಆರ್ಥಿಕ ವರ್ಷದ ಅಂತ್ಯದವರೆಗೆ ವೇತನ ಪಾವತಿಗಾಗಿ ರೂ.10.50ಲಕ್ಷ ರೂ.ಗಳ ಅನುದಾನವು ಸಾಕಾಗಲಿದ್ದು ಉಳಿದ ರೂ.3.50 ಲಕ್ಷಗಳನ್ನು ಲೆ.ಶಿ.2202-03-103-2-01 ಇತರೆ ಸರ್ಕಾರಿ ಕಾಲೇಜುಗಳಿಗೆ ಪುನರ್ ವಿನಿಯೋಗ ಮಾಡಿದ್ದಲ್ಲಿ ಅಧೀಕ್ಷರ ವೇತನ ಪಾವತಿಸಲು ಸಾಧ್ಯವಾಗುತ್ತದೆ ಎಂದು ತಿಳಿಸಿರುತ್ತಾರೆ. ಆದುದರಿಂದ ಈ ಬಗ್ಗೆ ಪುನರ್ ವಿನಿಯೋಗ ಮಾಡುವಂತೆ ಕೋರಿರುತ್ತಾರೆ.

ಆಯುಕ್ತರು ಕಾಲೇಜು ಶಿಕ್ಷಣ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಇಡಿ 51 ಯೋಯೋಕಾ 2006, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2006**

**[ಇಡಿ:28:ಸ್ವೀಮರ(ಯುನಿಕ್) 2006, ದಿನಾಂಕ: 15ನೇ ಮಾರ್ಚ್ 2006]**

ಸರ್ಕಾರವು ಕಾಲೇಜು ಶಿಕ್ಷಣ ಇಲಾಖೆಯ ಲೆ.ಶಿ. 2202-03-103-2-03-059 (ಯೋಜನೆ)ಯಲ್ಲಿ ಉಳಿದಿರುವ ರೂ.3.50 ಲಕ್ಷಗಳನ್ನು ಲೆ.ಶಿ.2202-03-103-2-01 (ಯೋಜನೆ)ಗೆ ಪುನರ್ ವಿನಿಯೋಗ ಮಾಡಲು ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರಿಗೆ ಈ ಮೂಲಕ ಅನುಮತಿ ನೀಡುತ್ತದೆ. ಮರುಹೊಂದಾಣಿಕೆ ಪ್ರಸ್ತಾವವನ್ನು ನಿಗದಿತ ನಮೂನೆಯಲ್ಲಿ ಇದರೊಂದಿಗೆ ಲಗತ್ತಿಸಿದೆ.

ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ.ಸಂಖ್ಯೆ:ಶಿಇ 200 ಐಎಫ್(ಬಿಎ)2006 ದಿ:4.3.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

**FORM 22A**
**(Article 309)**
**Education Department**
**Annexure to G.O. No. ED 51 YoYoKa 2006 Dt. 15.3.2006 (ED 28 Swimara unique) 2006 dt. 15.3.2006)**
**Re-appropriation Statement to accompany all applications for sanction to expenditure not provided for the in budget, or for additional allotments**

| Major, Minor, Sub-and Detailed Heads of Budget (The same details must be given as in the printed Budget Estimate) | Heads of estimate roposed to be increased | | | | Heads of estimate proposed to be reduced | | | | Remarks: (Here state fully the reasons for allotment and for anticipating savings |
|---|---|---|---|---|---|---|---|---|---|
| | Amount as in the san-ctioned Budget estimate | Actual pendit ure up-to-date viz. | Probable expen-diture during remain-der of the year | Amount of addi-tional allot-ment required | Amount as in the san-ctioned estima-ted | Actual expendit ure up-to-date viz. | Probable expen-diture during remain-der of the year | Amount available for re-appro-priation | |
| 2202-03-103-2-03-059 (Plan) | | | | | 130.00 | 100.00 | 26.50 | 3.50 | ಸರ್ಕಾರಿ ಮಹಿಳಾ ಕಾಲೇಜು ಮೈಸೂರು ದರ ವೇತನಕ್ಕಾಗಿ 10.50 ಲಕ್ಷ ರೂ. ಸಾಕಾಗಲಿದ್ದು ರೂ.3.50 ಲಕ್ಷ ಉಳಿತಾಯವಾಗಲಿದೆ. |
| 2202-03-103-2-01 (Plan) | 6.00 | 6.00 | 3.50 | 3.50 | | | | | 11 ಮಂದಿ ಅಧೀಕ್ಷಕರ ವೇತನಕ್ಕಾಗಿ ಈ ಮೊತ್ತದ ಅವಶ್ಯಕತೆ ಇದೆ. |
| | | | | | | | | | |

**NOTE:** Any further explanations should be given on the reverse.

Station: Bangalore
Date: 15.3.2006
P.R. 393

**K. SRIKANTESHWARA**
Special Officer and Ex-offici Joint Secretary (Planning)
Education Department.

## ಯೋಜನೆ ಹಾಗೂ ಸಾಂಖ್ಯಿಕ ಸಚಿವಾಲಯ

**ವಿಷಯ:** ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ದಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ:198:2006, ದಿನಾಂಕ:15.3.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯ ಮಂತ್ರಿಯವರು ಪ್ರಸ್ತುತ ಸಾಲಿನಲ್ಲಿ 27 ಜಿಲ್ಲೆಗಳ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡಲು ಪ್ರಸ್ತಾವನೆಯನ್ನು ಕಳುಹಿಸಿ, ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಜಿಲ್ಲೆಯ ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡಲು ಆದೇಶ ಹೊರಡಿಸುವಂತೆ ಸೂಚಿಸಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 14 ಯೋವಿವಿ 2006, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ದಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ 1ರಲ್ಲಿ ಕಾಣಿಸಿರುವಂತೆ ಸಚಿವರುಗಳನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿದ ಜಿಲ್ಲೆಗಳ ಜಿಲ್ಲಾ ಉಸ್ತುವಾರಿ ಸಚಿವರುಗಳನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಿವಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,

ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ

**ಅನುಬಂಧ-1**

| ಕ್ರ. ಸಂ. | ಜಿಲ್ಲೆಗಳ ಹೆಸರು | ಸಚಿವರುಗಳ ಹೆಸರು |
|---|---|---|
| 1. | ಬೀದರ್ | ಶ್ರೀ ಬಂಡೆಪ್ಪ ಕಾಶೆಂಪೂರ್ |
| 2. | ಗುಲ್ಬರ್ಗಾ | ಶ್ರೀ ಶರಣಬಸಪ್ಪಗೌಡ ದರ್ಶನಾಪುರ |
| 3. | ರಾಯಚೂರು | ಶ್ರೀ ಆಲ್‌ಕೋಡ್ ಹನುಮಂತಪ್ಪ |
| 4. | ಕೊಪ್ಪಳ | ಶ್ರೀ ಇಕ್ಬಾಲ್ ಅನ್ಸಾರಿ |
| 5. | ಬಳ್ಳಾರಿ | ಶ್ರೀ ಶ್ರೀರಾಮುಲು |
| 6. | ಬೆಳಗಾಂ | ಶ್ರೀ ಜಗದೀ ಶೆಟ್ಟರ್ (ಹೆಚ್ಚುವರಿ) |
| 7. | ಬಿಜಾಪುರ | ಶ್ರೀ ಕಟ್ಟಾ ಸುಬ್ರಮಣ್ಯ ನಾಯ್ಡು |
| 8. | ಬಾಗಲಕೋಟೆ | ಶ್ರೀ ಗೋವಿಂದ ಎಮ್. ಕಾರಜೋಳ |
| 9. | ಧಾರವಾಡ | ಶ್ರೀ ಜಗದೀಶ್ ಶೆಟ್ಟರ್ |
| 10. | ಹಾವೇರಿ | ಶ್ರೀ ಸಿ.ಎಂ. ಉದಾಸಿ |
| 11. | ಗದಗ | ಶ್ರೀ ಬಾಲಚಂದ್ರ ಜಾರಕೀಹೊಳಿ |
| 12. | ಉತ್ತರ ಕನ್ನಡ | ಡಾ।। ವಿ.ಎಸ್. ಆರ್ಚಾ (ಹೆಚ್ಚುವರಿ) |
| 13. | ದಾವಣಗೆರೆ | ಶ್ರೀ ಕೆ.ಎಸ್. ಈಶ್ವರಪ್ಪ |
| 14. | ಚಿತ್ರದುರ್ಗ | ಶ್ರೀ ಬಸವರಾಜ ಹೊರಟ್ಟಿ |
| 15. | ತುಮಕೂರು | ಶ್ರೀ ಸಿ. ಚೆನ್ನಿಗಪ್ಪ |
| 16. | ಶಿವಮೊಗ್ಗ | ಶ್ರೀ ಬಿ.ಎಸ್ ಯಡಿಯೂರಪ್ಪ |
| 17. | ಕೋಲಾರ | ಶ್ರೀ ಎನ್. ಚೆಲುವರಾಯಸ್ವಾಮಿ (ಹೆಚ್ಚುವರಿ) |
| 18. | ಬೆಂಗಳೂರು ಗ್ರಾಮಾಂತರ | ಶ್ರೀ ಸಿ. ಚನ್ನಿಗಪ್ಪ (ಹೆಚ್ಚುವರಿ) |
| 19. | ಬೆಂಗಳೂರು ನಗರ | ಶ್ರೀ ಆರ್. ಅಶೋಕ |
| 20. | ಮಂಡ್ಯ | ಶ್ರೀ ಎಸ್. ಚೆಲುವರಾಯಸ್ವಾಮಿ |
| 21. | ಮೈಸೂರು | ಶ್ರೀ ಡಿ.ಟಿ. ಜಯಕುಮಾರ |
| 22. | ಚಾಮರಾಜನಗರ | ಶ್ರೀ ಡಿ.ಟಿ. ಜಯಕುಮಾರ (ಹೆಚ್ಚುವರಿ) |
| 23. | ಹಾಸನ | ಶ್ರೀ ಹೆಚ್.ಡಿ. ಕುಮಾರಸ್ವಾಮಿ |
| 24. | ಚಿಕ್ಕಮಗಳೂರು | ಶ್ರೀ ಡಿ.ಹೆಚ್. ಶಂಕರಮೂರ್ತಿ |
| 25. | ಕೊಡಗು | ಶ್ರಿ ರಾಮಚಂದ್ರೇಗೌಡ |
| 26. | ದಕ್ಷಿಣ ಕನ್ನಡ | ಶ್ರೀ ಬಿ. ನಾಗರಾಜ ಶೆಟ್ಟಿ |
| 27. | ಉಡುಪಿ | ಡಾ।। ವಿ.ಎಸ್. ಆಚಾರ್ಯ |

**ಆರ್. ಶಿವಲಿಂಗಯ್ಯ**

ಪಿ.ಆರ್. 395

ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,

ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಜಲ ಸಂಪನ್ಮೂಲ ಇಲಾಖೆಯಲ್ಲಿನ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ:ಜಸಂಇ 60 ಎನ್‌ಪಿಸಿ 2004, ದಿನಾಂಕ:23.8.2004.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಜಲ ಸಂಪನ್ಮೂಲ ಇಲಾಖೆಯಲ್ಲಿನ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಲಾಗಿತ್ತು. ರಾಜ್ಯದಲ್ಲಿ ಹೊಸ ಸರ್ಕಾರವು ಅಸ್ತಿತ್ವಕ್ಕೆ ಬಂದಿರುವ ಹಿನ್ನೆಲೆಯಲ್ಲಿ, ಸದರಿ ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್ ರಚಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಅದರಂತೆ ಈ ಕೆಳಕಂಡ ಸರ್ಕಾರಿ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಜಸಂಇ 15 ಎನ್‌ಪಿಸಿ 2006 (ಭಾಗ), ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2006**

ಜಲ ಸಂಪನ್ಮೂಲ ಇಲಾಖೆಯಲ್ಲಿನ ನೀರಾವರಿ ಯೋಜನೆಗಳ ತಾಂತ್ರಿಕ ಸಲಹಾ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ:-

1. ಶ್ರೀ ಕೆ.ಸಿ. ರೆಡ್ಡಿ, ನಿವೃತ್ತ ಆಯುಕ್ತರು, ಲೋಕೋಪಯೋಗಿ ಇಲಾಖೆ, ಜಲ ಸಂಪನ್ಮೂಲ ಇಲಾಖೆ ಮತ್ತು ಇಂಧನ - ಅಧ್ಯಕ್ಷರು

**ಅಧಿಕಾರೇತರ ಸದಸ್ಯರು:-**

1. ಶ್ರೀ ಎಸ್.ಎಂ. ಪಂಚಗಟ್ಟಿ, ನಿವೃತ್ತ ಕಾರ್ಯದರ್ಶಿ, ನೀರಾವರಿ ಇಲಾಖೆ - ಸದಸ್ಯರು
2. ಶ್ರೀ ಕೆ. ಶಿವಶಂಕರ್, ನಿವೃತ್ತ ಕಾರ್ಯದರ್ಶಿ, ನೀರಾವರಿ ಇಲಾಖೆ - ಸದಸ್ಯರು
3. ಶ್ರೀ ಆರ್. ಬಸವನಗೌಡ. ನಿವೃತ್ತ ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ - ಸದಸ್ಯರು
4. ಪ್ರೊ|| ಎ. ಶ್ರೀಧರನ್, ನಿವೃತ್ತ ಪ್ರೊಫೆಸರ್, ಐ.ಐ.ಎಸ್.ಸಿ., ಬೆಂಗಳೂರು - ಸದಸ್ಯರು

**ಅಧಿಕಾರಿ ಸದಸ್ಯರು:-**

1. ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು - ಸದಸ್ಯರು
2. ಡಾ|| ಮಸೂದ್ ಷರೀಫ್, ಕಾರ್ಯಪಾಲಕ ಇಂಜಿನಿಯರ್ - ಸದಸ್ಯ-ಕಾರ್ಯದರ್ಶಿ

ಸದರಿ ಅಧಿಕಾರೇತರ ಸದಸ್ಯರುಗಳು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:3.2.2001, ರ ಆದೇಶದಂತೆ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಮೇಲೆ ವಿವರಿಸಿದ ಸಮಿತಿಯ ಕಾರ್ಯವೈಖರಿಗಳ ಬಗ್ಗೆ ವಿವರಗಳು ಈ ಕೆಳಕಂಡಂತಿರುತ್ತದೆ:

a. Planning and monitoring of all Major and Medium Irrigation Projects.
b. Scrutiny of estimates of all Major and Medium Irrigation works, before according administrative approval and technical sanction.
c. Tenders and claims of contractors in respect of all Major and Medium Irrigation works.
d. The Technical Advisory Committee shall make suitable recommendations to the Major Irrigation Projects Control Board (MIPC) in the above matter.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ರಂಗರಾಜು**

ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3),
ಜಲ ಸಂಪನ್ಮೂಲ ಇಲಾಖೆ.

ಪಿ.ಆರ್. 396

## ಶಿಕ್ಷಣ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲೆ ಶಿಡ್ಲಘಟ್ಟ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿನ ಆವರಣದಲ್ಲಿ ಶಿಕ್ಷಕರ ಭವನ ನಿರ್ಮಿಸಲು ನಿವೇಶನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ:ಯೋಕಟ್ಟಡ1:ಶಿ.ಭವನ ಶಿಡ್ಲಘಟ್ಟ 2005-06 ದಿನಾಂಕ: 3.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆ ಶಿಡ್ಲಘಟ್ಟ ಸರ್ಕಾರಿ ಸಂಯಕ್ತ ಪದವಿ ಪೂರ್ವ ಕಾಲೇಜಿನ ಆವರಣದಲ್ಲಿ ಸರ್ವೆ ನಂಬರ್ 05-01ರಲ್ಲಿ ಎರಡು ಎಕರೆ 29 ಗುಂಟೆ ಜಮೀನಿನಲ್ಲಿ ಪೂರ್ವ ಪಶ್ಚಿಮ 100 ಅಡಿ ಮತ್ತು ಉತ್ತರ ದಕ್ಷಿಣ 100 ಅಡಿ ಜಾಗವನ್ನು ಗುರುಭವನ ನಿರ್ಮಿಸಲು ಮಂಜೂರು ಮಾಡಬೇಕೆಂದು ಶಾಲಾಭಿವೃದ್ಧಿ ಸಂಸ್ಥೆಯವರು ಚರ್ಚಿಸಿ ಜಮೀನು ಬಿಟ್ಟುಕೊಡಲು ಸಮ್ಮತಿಸಿರುವುದರಿಂದ ಸದರಿ ಜಾಗದಲ್ಲಿ ಗುರುಭವನ ನಿರ್ಮಿಸಲು 100 x 100 ಅಡಿ ಜಾಗವನ್ನು ಮಂಜೂರು ಮಾಡಲು ಆದೇಶನ್ನು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಇಡಿ 514 ಯೋಸಕಾ 2005, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2006**

**[ಇಡಿ:30:ಸ್ವೀಮರ(ಯುನಿಕ್) 2006, ದಿನಾಂಕ: 13ನೇ ಮಾರ್ಚ್ 2006]**

ಕೋಲಾರ ಜಿಲ್ಲೆ ಶಿಡ್ಲಘಟ್ಟ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿನ ಆವರಣದಲ್ಲಿರುವ ಸರ್ವೆ ನಂ.05-01ರಲ್ಲಿನ 2 ಎಕರೆ 29 ಗುಂಟೆ ಜಮೀನಿನಲ್ಲಿ, ಪೂರ್ವ ಪಶ್ಚಿಮ 100 ಅಡಿ ಮತ್ತು ಉತ್ತರ ದಕ್ಷಿಣ 100 ಅಡಿ ಜಾಗವನ್ನು (100 x 100 ಅಡಿ) ಗುರುಭವನ ನಿರ್ಮಿಸಲು, ಸರ್ಕಾರದಿಂದ ಯಾವುದೇ ರೀತಿಯ ಆರ್ಥಿಕ ನೆರವು ನೀಡುವುದಿಲ್ಲವೆಂಬ ಷರತ್ತನ್ನು ವಿಧಿಸಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಮತಿಯನ್ನು ಅ.ಟಿ.ಸಂಖ್ಯೆ:ಶಿಇ:1091 ಐಎಫ್(ಬಿಎ)2005 ದಿನಾಂಕ:1.3.2006 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 399

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

**ವಿಷಯ:** ಬೆಳಗಾಂ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ ಕಿತ್ತೂರಿನ ರಾಣಿ ಚೆನ್ನಮ್ಮ ವಸತಿ ಶಾಲೆಗೆ ಸಿಬ್ಬಂದಿ ವಸತಿ ಗೃಹ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಕುರಿತು.

**ಉಲ್ಲೇಖ:**
1. ಮುಖ್ಯ ಇಂಜನಿಯರ್‌ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ, ಇವರ ಪತ್ರದ ಸಂಖ್ಯೆ: ಸಿ.ಇ.ಎನ್/ತಾಂ ಸ-2/ಬೈಲಹೊಂಗಲ/ ಕಿತ್ತೂರ ವಸತಿ ಶಾಲೆ/05-06 ದಿನಾಂಕ:11.11.2006.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಪತ್ರ ಸಂಖ್ಯೆ:ಯೋ(i)ಕಿತ್ತೂರು, ಸಿಬ್ಬಂದಿ.ವ.ಗೃ.ನಿಮಾಣ.21/ 2005-06 ದಿನಾಂಕ:12.12.2005.

**ಪ್ರಸ್ತಾವನೆ:**

ಮೇಲೆ (i)ರಲ್ಲಿ ಓದಲಾದ ಪತ್ರದಲ್ಲಿ ಬೆಳಗಾಂ ಜಿಲ್ಲೆ ಬೈಲಹೊಂಗಲ ತಾ: ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗೆ ಸಿಬ್ಬಂದಿ ವಸತಿ ಗೃಹ ನಿರ್ಮಾಣ ಮಾಡುವ ಸಲುವಾಗಿ 2005-06ನೇ ಸಾಲಿಗೆ ಲೆಕ್ಕ ಶೀರ್ಷಿಕೆ 4202-01-202-1-01 ಯೋಜನೆಯಡಿಯಲ್ಲಿ ರೂ.50.00 ಲಕ್ಷದ ಮೊತ್ತದ ಅಂದಾಜು ಪತ್ರಿಕೆಯನ್ನು ಸಲ್ಲಿಸಿ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ಅಗತ್ಯವಿರುವ ಶೇಕಡ 30ರಷ್ಟು ಅನುದಾನವಾದ ಕನಿಷ್ಠ ರೂ.14.00 ಲಕ್ಷಗಳನ್ನು ಒದಗಿಸಬೇಕೆಂದು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಕೋರಿರುತ್ತಾರೆಂದು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ತಿಳಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸದರಿ ವಸತಿ ಶಾಲೆಗೆ ಸಿಬ್ಬಂದಿ ವಸತಿ ಗೃಹ ನಿರ್ಮಾಣಕ್ಕಾಗಿ ಬೇಕಾದ ರೂ 50.00 ಲಕ್ಷಗಳಲ್ಲಿ ಪ್ರಸಕ್ತ ಸಾಲಿಗೆ 2005-06ನೇ ಸಾಲಿಗೆ ಶೇಕಡ 30ರಷ್ಟು ಅನುದಾನವಾದ ಕನಿಷ್ಠ ರೂ 14.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 4202-01-202-1-01 ಯೋಜನೆಯಡಿ ಕಲ್ಪಿಸಲಾಗಿರುವ ರೂ.40.00 ಲಕ್ಷಗಳ ಅನುದಾನದಲ್ಲಿ ಉಳಿದ ರೂ. 14.67 ಲಕ್ಷಗಳನ್ನು ಸದರಿ ಶಾಲೆಯ ಸಿಬ್ಬಂದಿ ವಸತಿ ಗೃಹ ನಿರ್ಮಾಣಕ್ಕೆ ಒದಗಿಸಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಲೋಕೋಪಯೋಗಿ ಇಲಾಖೆಗೆ ಆದೇಶ ನೀಡುವಂತೆ ಕೋರುತ್ತಾ ಸಿಬ್ಬಂದಿ ವಸತಿ ಗೃಹ ನಿರ್ಮಾಣದ ಅಂದಾಜು ಪತ್ರಿಕೆ ರೂ.50,00,000/-ಗಳು ಹಾಗೂ ನೀಲಿ ನಕಾಶೆಯನ್ನು ತಯಾರಿಸಿ ಸಲ್ಲಿಸುತ್ತಾ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಕೋರಿರುತ್ತಾರೆ.

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 26 ಯೋಯೋಕ 2006, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2006**
**[ಇಡಿ 26 ಸ್ವೀಮರ (ಯೂನಿಕ್) 2006, ದಿನಾಂಕ: 10ನೇ ಮಾರ್ಚ್ 2006]**

ಬೆಳಗಾಂ ಜಿಲ್ಲೆ ಬೈಲಹೊಂಗಲ ತಾ: ಕಿತ್ತೂರು ರಾಣಿ ಚೆನ್ನಮ್ಮ ಬಾಲಕಿಯರ ವಸತಿ ಶಾಲೆಗೆ ಸಿಬ್ಬಂದಿ ವಸತಿ ಗೃಹ ನಿರ್ಮಾಣಕ್ಕಾಗಿ 2005-06ನೇ ಸಾಲಿನ ಪೂರಕ ಅಂದಾಜಿನ (ಮೊದಲನೇ ಕಂತು) ಶಿಕ್ಷಣ ಇಲಾಖೆಯ ಅಭಿಯಾಚನೆ ಸಂಖ್ಯೆ 17 ಬಾಬ್ತು ಸಂಖ್ಯೆ.4ರಲ್ಲಿ ಕಿತ್ತೂರಿನ ಕಿತ್ತೂರು ರಾಣಿ ಚೆನ್ನಮ್ಮ ಬಾಲಕಿಯರ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ರೂ.40.00 ಲಕ್ಷಗಳನ್ನು ಒದಗಿಸಲಾಗಿದ್ದು ಒಟ್ಟು ರೂ.153.00 ಲಕ್ಷಗಳನ್ನು ಅಭಿಯಾಚನೆ ಲೆಕ್ಕ ಶೀರ್ಷಿಕೆ 4202-01-202-1-01-(ಯೋಜನೆ) 139 ಪ್ರಧಾನ ಕಾಮಗಾರಿಗಳ ಅಡಿಯಲ್ಲಿ ಒಟ್ಟು ರೂ.153.00 ಲಕ್ಷಗಳನ್ನು ಒದಗಿಸಲಾಗಿರುತ್ತದೆ.

ಬೆಳಗಾಂ ಜಿಲ್ಲೆ ಬೈಲಹೊಂಗಲ ತಾ: ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗೆ ಸಿಬ್ಬಂದಿ ವಸತಿ ಗೃಹ ನಿರ್ಮಾಣಕ್ಕಾಗಿ ರೂ.14.67 ಲಕ್ಷಗಳ (ಹದಿನಾಲ್ಕು ಲಕ್ಷದ ಅರವತ್ತೇಳು ಸಾವಿರ ರೂಪಾಯಿಗಳು ಮಾತ್ರ) ಅಂದಾಜು ಪಟ್ಟಿಯ ನೆಲಮಹಡಿಗೆ ಮಾತ್ರ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಹಾಗೂ ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡಿ ಆದೇಶಿಸಲಾಗಿದೆ.

ಸದರಿ ಲೆಕ್ಕ ಶೀರ್ಷಿಕೆಯು ಲಿಂಕ್ ಡಾಕ್ಯುಮೆಂಟ್‌ನಿಂದ ಹೊರತುಪಡಿಸಿದೆ.

ಶಿಕ್ಷಣ ಇಲಾಖೆಯ ಅಭಿಯಾಚನೆ ಸಂಖ್ಯೆ:17 ಬಾಬ್ತು ಸಂಖ್ಯೆ.4ರಲ್ಲಿ ಕಿತ್ತೂರಿನ ಕಿತ್ತೂರು ರಾಣಿ ಚೆನ್ನಮ್ಮ ಬಾಲಕಿಯರ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ರೂ.40.00 ಲಕ್ಷಗಳನ್ನು (ನಲವತ್ತು ಲಕ್ಷ ರೂಪಾಯಿಗಳು ಮಾತ್ರ) ಒದಗಿಸಲಾಗಿದ್ದು, ಅಭಿಯಾಚನೆ ಲೆಕ್ಕ ಶೀರ್ಷಿಕೆ 4202-01-202-1-01-(ಯೋಜನೆ) ಉಪ ಶೀರ್ಷಿಕೆ 139 ಪ್ರಧಾನ ಕಾಮಗಾರಿಗಳು ಇದರ ಅಡಿಯಲ್ಲಿ ಸದರಿ ವೆಚ್ಚವನ್ನು ಭರಿಸತಕ್ಕದ್ದು.

ಕೈಗೆತ್ತಿಕೊಳ್ಳುವ ಕಟ್ಟಡಗಳ ಗುಣಮಟ್ಟ ಸಮರ್ಪಕವಾಗಿರುವ ಬಗ್ಗೆ ಸಂಬಂಧಿಸಿದ ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಜಿಲ್ಲಾ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ನಿಗಾವಹಿಸತಕ್ಕದ್ದು. ಹಣ ಬಳಕೆ ಪ್ರಮಾಣ ಪತ್ರವನ್ನು ಹಾಗೂ ಭೌತಿಕ ಪ್ರಗತಿಯ ವರದಿಯನ್ನು ತಪ್ಪದೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ಮತ್ತು ಅದರಡಿಯಲ್ಲಿನ ನಿಯಮಗಳನ್ನು ಚಾಚೂ ತಪ್ಪದೇ ಕಡ್ಡಾಯವಾಗಿ ಹಾಗೂ ಕಟ್ಟು ನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅ.ಟಿ.ಸಂಖ್ಯೆ:ಇಡಿ 142 ಐಎಫ್(ಬಿಎ) 2006, ದಿನಾಂಕ: 15.2.2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 400

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದಲ್ಲಿ ನರ್ಸಿಂಗ್ ಮತ್ತು ತರಬೇತಿ ಸಹಾಯಕ ನಿರ್ದೇಶಕರಾಗಿರುವ ಶ್ರೀ ತಿಪ್ಪೇಸ್ವಾಮಿರವರ ವಿರುದ್ಧ ಲೋಕಾಯುಕ್ತ ವಿಚಾರಣೆ ಕಾದಿರಿಸಿ ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1. ತಾ: 17.11.2005 ಸಂಖ್ಯೆ: DPG/ME/10/2005-06 ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

2. ತಾ: 23.11.2005 ಸಂಖ್ಯೆ: ಲೋಕ್:ಐಎನ್‌ವಿ(ಜ):ಸಿಟಿ:ಕ್ರೈಂ:47:2005ರ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕರ್ನಾಟಕ ಲೋಕಾಯುಕ್ತರವರ ಪತ್ರ.

**ಪೀಠಿಕೆ:**

1) ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ದಿ:16.11.2005ರಂದು ಕೋಲಾರದ ಪವನ್ ನರ್ಸಿಂಗ್ ಕಾಲೇಜಿನಲ್ಲಿ ಮೊದಲನೇ ವರ್ಷದಲ್ಲಿ ವ್ಯಾಸಂಗಮಾಡುತ್ತಿರುವ ಎಸ್.ಜೆ. ಉಮಾ ಎಂಬುವರಿಂದ ಅದೇ ಜಿಲ್ಲೆಯ ಚಿಂತಾಮಣಿಯ ಸೆಂಟ್‌ಫಿಲೋಮಿನಾಗೆ ವರ್ಗಾವಣೆಗೆ ಸಂಬಂಧಿಸಿದಂತೆ ಸಹಾಯಕ ನಿರ್ದೇಶಕರಾದ ಶ್ರೀ ತಿಪ್ಪೇಸ್ವಾಮಿರವರು ಅವರಿಂದ ರೂ. 15,000/-ಗಳನ್ನು ಲಂಚ ಪಡೆಯುತ್ತಿದ್ದಾಗ ಮಾನ್ಯ ಲೋಕಾಯುಕ್ತರಿಂದ ಟ್ರ್ಯಾಪ್ ಆಗಿದ್ದು ಮೊಕದ್ದಮೆ ನಂ. 47/2005ರಲ್ಲಿ ಆರೋಪಿತ ಅಧಿಕಾರಿಯನ್ನು ದಸ್ತಗಿರಿ ಮಾಡಿರುತ್ತದೆಂದು ವರದಿ ಮಾಡಿರುತ್ತಾರೆ.

2) ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ದಿ:16.11.2006 ರಂದು ಫಿರ್ಯಾದುದಾರರಾದ ಶ್ರೀ ತಿಮ್ಮರಾಯಪ್ಪ ಐಮರೆಡ್ಡಿಹಳ್ಳಿ, ಕಸಬಾ ಹೋಬಳಿ, ಚಿಂತಾಮಣಿ ತಾಲ್ಲೂಕ್, ಕೋಲಾರ ಜಿಲ್ಲೆ ರವರು ನಗರ ವಿಭಾಗದ ಪೊಲೀಸ್ ಉಪ ಅಧೀಕ್ಷಕರ ಬಳಿ ಹಾಜರಾಗಿ, ಸಲ್ಲಿಸಿರುವ ದೂರಿನ ಸಂಕ್ಷಿಪ್ತ ಸಾರಾಂಶವೇನೆಂದರೆ, ಫಿರ್ಯಾದುದಾರರ ನಾದಿನಿಯ ಮಗಳಾದ ಕುಮಾರಿ ಎಸ್.ಜೆ. ಉಮಾರವರಿಗೆ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದವರು ಕೋಲಾರ ಜಿಲ್ಲೆಯ ಪವನ್ ನರ್ಸಿಂಗ್ ಸ್ಕೂಲ್‌ನಲ್ಲಿ ಸೀಟು ನೀಡಿದ್ದರಿಂದ, ಉಮಾರವರು ಫಿರ್ಯಾದುದಾರರು ಮನೆಯಲ್ಲಿ ವಾಸಿಸುತ್ತಿದ್ದರು. ವಿದ್ಯಾಭ್ಯಾಸ ಸಲುವಾಗಿ ಕೋಲಾರಕ್ಕೆ ಹೋಗಿ ಬರಲು ಉಮಾರವರಿಗೆ ತೊಂದರೆಯಾಗುತ್ತಿದ್ದ ಕಾರಣ, ಚಿಂತಾಮಣಿಯಲ್ಲಿರುವ ಫಿಲೋಮಿನಾ ನರ್ಸಿಂಗ್ ಸ್ಕೂಲ್‌ಗೆ ಅವರನ್ನು ವರ್ಗಾವಣೆ ಮಾಡಿಕೊಡಬೇಕೆಂದು, ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ), ವೈದ್ಯಕೀಯ ಶಿಕ್ಷಣ ನಿರ್ದೇಶಕರ ಕಛೇರಿ, ಆನಂದರಾವ್‌ವೃತ್ತ, ಬೆಂಗಳೂರು ರವರನ್ನು ಫಿರ್ಯಾದುದಾರರು ಕೋರಿಕೊಂಡಾಗ, ಸದರಿ ವರ್ಗಾವಣೆಯನ್ನು ಮಾಡಿಕೊಡಲು ತಿಪ್ಪೇಸ್ವಾಮಿರವರು ರೂ.20,000/- ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿದ್ದು, ಫಿರ್ಯಾದುದಾರರು ಅಷ್ಟು ಹಣವನ್ನು ಕೊಡಲು ಸಾಧ್ಯವಿಲ್ಲ ಎಂದು ತಿಳಿಸಿದಾಗ, ರೂ. 15,000/- ಗಳನ್ನಾದರೂ ಕೊಡಲೇಬೇಕೆಂದು ಒತ್ತಾಯಿಸಿರುತ್ತಾರೆಂಬುದಾಗಿರುತ್ತದೆ. ಫಿರ್ಯಾದುದಾರರಿಗೆ ಲಂಚದ ಹಣವನ್ನು ಕೊಟ್ಟು, ವರ್ಗಾವಣೆ ಮಾಡಿಸಲು ಇಷ್ಟವಿಲ್ಲದಿದ್ದ ಕಾರಣ, ಶ್ರೀ ತಿಪ್ಪೇಸ್ವಾಮಿ ರವರ ವಿರುದ್ಧ ಕಾನೂನು ರೀತ್ಯಾ ಕ್ರಮವನ್ನು ಕೈಗೊಳ್ಳಬೇಕೆಂದು ಕೋರಿರುತ್ತಾರೆ.

3) ಮೇಲ್ಕಂಡ ದೂರಿನ ಹಿನ್ನೆಲೆಯಲ್ಲಿ ಪೊಲೀಸ್ ನಿರೀಕ್ಷಕರಾದ ಶೀ ಎಂ.ಜಿ. ಸುಬ್ಬರಾವ್ ರವರು ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶಕರ ಕಛೇರಿ, ಆನಂದರಾವ್ ವೃತ್ತ, ಬೆಂಗಳೂರು ರವರ ವಿರುದ್ಧ ಲಂಚ ನಿರೋಧ ಕಾಯ್ದೆ 1988ರ ಕಲಂ 7, 13 (i) (d) ಸಹವಾಚನ ಕಲಂ 13(2) ಪ್ರಕಾರ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ 47/2005ರಲ್ಲಿ ದಿ:16.11.2005 ರಂದು ಪ್ರಕರಣವನ್ನು ದಾಖಲಿಸಿಕೊಂಡು, ತನಿಖೆಯನ್ನು ಕೈಗೊಂಡಿದ್ದರು.

4) ಔಚಿತ್ಯ ಪೂರ್ವ ಕಾರ್ಯಗಳನ್ನು ನೆರವೇರಿಸಿದ ನಂತರ, ತನಿಖಾಧಿಕಾರಿಯು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮೇತ ದಿ:16.1.2005ರಂದು ಆನಂದರಾವ್ ವೃತ್ತದಲ್ಲಿರುವ ಆರೋಪಿತರ ಕಛೇರಿಯಲ್ಲಿ ಬೀಸಿದ ಲಂಚದ ಬಲೆಯು ಯಶಸ್ವಿಯಾಗಿದ್ದು, ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ), ವೈದ್ಯಕೀಯ ಶಿಕ್ಷಣ ನಿರ್ದೇಶಕರ ಕಛೇರಿ, ಆನಂದರಾವ್ ವೃತ್ತ ಬೆಂಗಳೂರು ರವರು ಫಿರ್ಯಾದುದಾರರಿಂದ ಲಂಚದ ಹಣ ರೂ. 15,000/- ಗಳನ್ನು ಸ್ವೀಕರಿಸುತ್ತಿದ್ದಾಗ, ಬೆಂಗಳೂರು ನಗರ ಲೋಕಾಯುಕ್ತ ಪೊಲೀಸರಿಗೆ ನೇರವಾಗಿ ಸಿಕ್ಕಿಬಿದ್ದಿರುತ್ತಾರೆ. ಲಂಚದ ಹಣ ರೂ. 15,000/- ಗಳು ಆರೋಪಿತರ ಟೇಬಲ್ ಕೆಳಭಾಗದ ಬಲಭಾಗದ ಮೇಲಿದ್ದು, ಅದನ್ನು ಯಥಾರೀತಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಆರೋಪಿತರು ಲಂಚದ ಹಣವನ್ನು ಫಿರ್ಯಾದುದಾರರಿಂದ ಒತ್ತಾಯಿಸಿ ಪಡೆದುಕೊಂಡ ಬಗ್ಗೆ ನೆರಳು ಸಾಕ್ಷಿದಾರರು ಮಹಜರ್ ಸಮಯದಲ್ಲಿ ನುಡಿದಿರುತ್ತಾರೆಂದು ತಿಳಿಸಲಾಗಿದೆ.

5) ಆರೋಪಿತ ಸರ್ಕಾರಿ ಅಧಿಕಾರಿಯನ್ನು ಬಂಧಿಸಿ ತದನಂತರ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ. ಪ್ರಕರಣದ ತನಿಖೆಯು ಮುಂದುವರೆದಿದೆ. ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ತಿಳಿಸುತ್ತಾ, 1957ರ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ 10ನೇ ನಿಯಮದನ್ವಯ ಸದರಿಯವರನ್ನು ದಸ್ತಗಿರಿಯಾದ ದಿನಾಂಕದಿಂದ ಅಂದರೆ ದಿ:16.11.2005 ರಿಂದಲೇ ಅಮಾನತ್ತಿನಲ್ಲಿಟ್ಟಿರುವಂತೆ ಪರಿಗಣಿಸುವಂತೆ ಕೋರಲಾಗಿದೆ. ಪ್ರಕರಣವನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 163 ಎಂಎಂಸಿ 2005, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2006**

6) ಶ್ರೀ ತಿಪ್ಪೇಸ್ವಾಮಿ, ಸಹಾಯಕ ನಿರ್ದೇಶಕರು (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು ರವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ 10(1)(ಬಿ)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ವಿರುದ್ಧ ಲೋಕಾಯುಕ್ತ ತನಿಖೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

7) ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ನೇ ನಿಯಮದಡಿ ಲಭ್ಯವಾಗುವ ಜೀವನಾಂಶ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ, ಹಾಗೂ 104(2)ನೇ ನಿಯಮದಡಿ ಅವರು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 401

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜಿನ ವೈದ್ಯಶಾಸ್ತ್ರ ಉಪನ್ಯಾಸಕ ಡಾ: ಎಸ್.ಎಂ. ಶಿವಪ್ರಸಾದ್‌ರವರಿಗೆ ವಿಷಯ ಬದಲಾವಣೆ.

**ಓದಲಾಗಿದೆ:** ದಿ: 26.10.2005 ಸಂಖ್ಯೆ ವಶೀಅ (2)47/05-06ರ ವೈದ್ಯಕಿಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1. ಬೆಂಗಳೂರು ವೈದ್ಯಕೀಯ ಕಾಲೇಜಿನ ವೈದ್ಯಶಾಸ್ತ್ರ ಉಪನ್ಯಾಸಕ ಡಾ: ಎಸ್.ಎಂ. ಶಿವಪ್ರಸಾದ್‌ರವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಅಸಿಸ್ಟೆಂಟ್ ಆಗಿ ದಿ:23.1.1984 ರಂದು ಸರ್ಕಾರಿ ಸೇವೆಗೆ ಸೇರಿರುತ್ತಾರೆ. ಅವರ ಖಾಯಂಪೂರ್ವ ಸೇವಾವಧಿಯನ್ನು ತೃಪ್ತಿಕರವೆಂದು ದಿ:21.01.1986 ರಂದು ಘೋಷಿಸಲಾಗಿದೆ. ಅವರು ಆಗಸ್ಟ್ 1983ರಲ್ಲಿ ಎಂಡಿ (ಜನರಲ್ ಮೆಡಿಸನ್) ಸ್ನಾತಕೋತ್ತರ ಪದವಿಯನ್ನು ಪಡೆದಿರುತ್ತಾರೆ. ಅವರನ್ನು ದಿ:29.6.1991 ಸಂಖ್ಯೆ: ಆಕುಕ 497 ಹೆಚ್ ಎಸ್ ಹೆಚ್ 1991ರಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಉಪನ್ಯಾಸಕರ ಹುದ್ದೆಗೆ ಅನ್ಯಪರ ಸೇವೆ ಮೇಲೆ ನೇಮಿಸಲಾಗಿದೆ ನಂತರ ದಿ:24.1.2002 ರಿಂದ 23.1.2005 ವರಗೆ ಡಿಎಂ (ನೆಫ್ರಾಲಜಿ) ಸ್ನಾತಕೋತ್ತರ ವ್ಯಾಸಂಗಕ್ಕಾಗಿ 3 ವರ್ಷಗಳ ಅವಧಿಗೆ ನಿಯೋಜಿಸಲಾಗಿತ್ತು. ಅವರು ಡಿಸೆಂಬರ್ 2004ರಲ್ಲಿ ಡಿಎಂ ನೆಫ್ರಾಲಜಿ ಸ್ನಾತಕೋತ್ತರ ಪದವಿಯನ್ನು ಪಾಸು ಮಾಡಿರುತ್ತಾರೆ ಈಗ ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ವೈದ್ಯಶಾಸ್ತ್ರ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿದ್ದು ವೈದ್ಯಶಾಸ್ತ್ರ ಉಪನ್ಯಾಸಕರ ಹುದ್ದೆಯಿಂದ ನೆಫ್ರಾಲಜಿ ಉಪನ್ಯಾಸಕರ ಹುದ್ದೆಗೆ ವಿಷಯ ವರ್ಗಾವಣೆಯನ್ನು ಮಾಡುವಂತೆ ಕೋರಿಕೊಂಡಿರುತ್ತಾರೆ ಮತ್ತು ಅದನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 173 ಎಂಎಂಸಿ 2005, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2006**

2. ಬೆಂಗಳೂರು ವೈದ್ಯಕೀಯ ಕಾಲೇಜಿನ ವೈದ್ಯಶಾಸ್ತ್ರ ಉಪನ್ಯಾಸಕ ಡಾ: ಎಸ್.ಎಂ. ಶಿವಪ್ರಸಾದ್ ರವರಿಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ ನಿಯಮ 16(ಇ)(ii) ರ ಪ್ರಕಾರ ವೈದ್ಯಶಾಸ್ತ್ರ ಉಪನ್ಯಾಸಕ ಹುದ್ದೆಯಿಂದ ನೆಫ್ರಾಲಜಿ ಉಪನ್ಯಾಸಕ ಹುದ್ದೆಗೆ ವಿಷಯ ಬದಲಾವಣೆ ಮಾಡಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 402

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## HEALTH AND FAMILY WELFARE SECRETARIAT

**Sub:** Constitution of High Power Committe reg.

**Read:**
1. Letter No. DME/PER/76/2005-06 dated 28.02.2006 from the Director of Medical Education, Bangalore.
2. Judgement of Hon'le High Court of Karnataka in WP No. 414/2006 (Edn), dated 17.2.2006.

**Preamble:-**

The Hon'ble High Court of Karnataka in its order dated 17.2.2006 read at (1) above, has constituted a High Power Committee under the Chairmanship of Hon'ble Justice (Rd.) A.V. Murugod to undertake functions such as consideration of report of the Medical Council of India and and other related matters referred to in the judgement.

The Director of Medical Education in his letter dated 28.2.2006 read at (2) above, has requested Government to constitute a High Power Committee as ordered by the Hon'ble High Court of Karnataka read at (1) above. Accordingly the following Order.

**Government Order No. IIFW 81 MPS 2006, Bangalore, Dated: 28th February 2006**

In pursuance of the order of the Hon'bl High Court of Karnataka in WP No. 414/2005(Edn), dated 17.2.2006, Government is pleased to Constitute a High Power Committee under the Chairmanship of the Hon'ble Mr. Justice (Rtd.) A.B. Murgod with the following members to undertake the functions such s consideration of report of the Medical Council of India and other related matters referred to in the judgement, with immediate effect.

| | | | |
|---|---|---|---|
| (1) | Hon'ble Mr. Justice (Rtd.) A.B. Murgod, High Court of Karnataka | - | Chairman |
| (2) | Mrs Dr. Sachdeva, Former Secretary of MCI | - | Member |
| (3) | Dr. P. Ramanath, Rtd. Principal Vims Bellary. | - | Member |
| (4) | Dr. Pampanagowda, Rtd. Principal VIMS Bellary | - | Member |
| (5) | Dr. S. Ramananda Shetty, Director of Medcal Education, Bangalore | - | Member Secretary |

By Order and in the name of the Governor of Karnataka,

**MAAZ AHMED SHARIEF**

P.R. 403

Joint Secretary to Government,

Heath & Family Welfare Department (Medical Education)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಕೇಂದ್ರ ಪುರಸ್ಕೃತ ಯೋಜನೆಯಡಿ ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಕಾಲೇಜುಗಳ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರವು ಮಂಜೂರು ಮಾಡುವ ಸಹಾಯಾನುಧನವನ್ನು ಸಂಬಂಧಿಸಿದ ಸಂಸ್ಥೆಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ (ಆಯುಷ್ ಇಲಾಖೆ) ಇವರ ಪತ್ರ ಸಂ:ಭಾವೈಪ:5:ಸಿಎಸ್ಎಸ್:04-05 ದಿನಾಂಕ:25.7.05,19.11.2005 ಮತ್ತು 25.2.2006.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರ ಪತ್ರದಲ್ಲಿ ಕೇಂದ್ರ ಸರ್ಕಾರದ ಪತ್ರ ದಿನಾಂಕ: 23.9.2003 ಹಾಗೂ ಸಿ.ಸಿ.ಸ್ಲೀಪ್, ದಿನಾಂಕ:19.2.004 ರಲ್ಲಿ ರೂ.10.932 ಲಕ್ಷಗಳ ಮತ್ತು ಕೇಂದ್ರ ಸರ್ಕಾರದ ಪತ್ರ ದಿನಾಂಕ:20.10.2004 ಹಾಗೂ ಸಿ.ಸಿ.ಸ್ಲೀಪ್ ದಿನಾಂಕ: 22.11.2004 ರಲ್ಲಿ ರೂ10.00 ಲಕ್ಷಗಳನ್ನು ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ ಸಹಾಯಾನುಧನವನ್ನು ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಿರುವುದರಿಂದ, ಶ್ರೀ ಬಿ.ಎಂ.ಕೆ. ಆಯುರ್ವೇದ ಮೆಡಿಕಲ್ ಕಾಲೇಜು, ಬೆಳಗಾಂ ಇದಕ್ಕೆ ರೂ.0.932 ಲಕ್ಷ ಹಾಗೂ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು ಇವರಿಗೆ ರೂ.10.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 331 ಪಿಟಿಡಿ 2004, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, 2005-06ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2210-05-200-0-05 ಯೋಜನೆ ಉಪಲೆಕ್ಕಶೀರ್ಷಿಕೆ 101ರ ಸಹಾಯಾನುಧನದಲ್ಲಿ ರೂ.400.00 ಲಕ್ಷಗಳ ಅನುದಾನವನ್ನು ಒದಗಿಸಿದ್ದು, ಈ ಅನುದಾನದ ಪೈಕಿ ಒಟ್ಟು ರೂ.10.932 ಲಕ್ಷಗಳನ್ನು ಈ ಕೆಳಗಿನಂತೆ ಸಂಬಂಧಿಸಿದ ಸಂಸ್ಥೆಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

1. ಶ್ರೀ ಬಿ.ಎಂ.ಕೆ. ಮೆಡಿಕಲ್ ಕಾಲೇಜು, ಬೆಳಗಾಂ, ಇದಕ್ಕೆ
   ರೂ.0.932 ಲಕ್ಷ (ಶೂನ್ಯದಶಾಂಶ ಒಂಬತ್ತು ನೂರ ಮುವತ್ತೆರಡು ಲಕ್ಷ ರೂಗಳು ಮಾತ್ರ)
2. ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು
   ಇದಕ್ಕೆ ರೂ. 10.00 ಲಕ್ಷಗಳು (ಹತ್ತು ಲಕ್ಷ ರೂ.ಗಳು ಮಾತ್ರ)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 404

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀಮತಿ ಸರೋಜಿನಿ ಬಿ. ಕಡೇಮನಿ ನಿರೂಪಣಾಧಿಕಾರಿ (ಸ್ವತಂತ್ರ ಪ್ರಭಾರ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾವೇರಿ ಇವರು ಪರಿವೀಕ್ಷಣಾಧಿಕಾರಿ ದರ್ಜೆ-1 ವೃದದಲ್ಲಿ 15 ವರ್ಷಗಳ ಸೇವೆ ಸಲ್ಲಿಸಿರುವುದಕ್ಕೆ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ನಿರ್ದೇಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪತ್ರ ಸಂ:ಮಮಇ/ನಿಸಿಗೆ:103:2001-2002, ದಿನಾಂಕ: 30.3.2002.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಶ್ರೀಮತಿ ಸರೋಜಿನಿ ಬಿ. ಕಡೇಮನಿ, ನಿರೂಪಣಾಧಿಕಾರಿ (ಸ್ವತಂತ್ರ ಪ್ರಭಾರ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾವೇರಿ ಇವರು ಪರಿವೀಕ್ಷಣಾಧಿಕಾರಿ ದರ್ಜೆ-1ರ ವೃಂದದಲ್ಲಿ 15 ವರ್ಷದಲ್ಲಿ ಸೇವೆ ಪೂರೈಸಿರುವುದಕ್ಕೆ ದಿ:8.5.2001 ರಿಂದ ಜಾರಿಗೆ ಬರುವಂತೆ ಸ್ವಯಂಚಾಲಿತ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಲಾಗಿದೆ.

ಇಲಾಖೆಯ ಪ್ರಸ್ತಾವನೆಯಂತೆ, ಸದರಿ ಅಧಿಕಾರಿಯು ದಿ:31.1.1983 ರಂದು ಮುಂಬಡ್ತಿ ಮೂಲಕ ಪರಿವೀಣಾಧಿಕಾರಿ ದರ್ಜೆ-1ರ ಹುದ್ದೆಗೆ ನೇಮಕಾತಿ ಆಗಿದ್ದು, ಮಹಾಲೇಖಪಾಲರು ಪರಿಗಣಿಸಿರುವಂತೆ ಇವರಿಗೆ ಸದರಿ ವೃಂದದಲ್ಲಿ ದಿ:8.5.1996 ರಿಂದ ಜಾರಿಗೆ ಬರುವಂತೆ 10 ವರ್ಷಗಳ ಸೇವೆ ಪೂರೈಸಿರುವುಕ್ಕೆ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಲಾಗಿದೆ. ಸದರಿ ವೃಂದದಲ್ಲಿ ದಿ:7.5.2001ಕ್ಕೆ 15 ವರ್ಷಗಳ ಸೇವೆ ಪೂರೈಸಿದ್ದು, 15 ವರ್ಷಗಳ ಸೇವೆ ಪೂರೈಸುವ ಪೂರ್ವದಲ್ಲಿ ಅಧಿಸೂಚನೆ ಸಂ:ಮಮಇ 8/ಎಸ್‌ಜೆಡಿ/2001 ದಿ: 23.3.2001ರಲ್ಲಿ ಕೆ.ಸಿ.ಎಸ್.ಆರ್ಸ್ ನಿಯಮ 32ರ ಅನ್ವಯ ರೂ.7400-13120ರ ವೇತನ ಶ್ರೇಣಿಯ ಸಹಾಯಕ ನಿರ್ದೇಶಕರ ವೃಂದದ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ್ದು, ಯೋಜನಾಧಿಕಾರಿ (ಆಡಳಿತ), ಸ್ತ್ರೀ ಶಕ್ತಿ ಯೋಜನೆ, ಕೇಂದ್ರ ಕಚೇರಿ, ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇಲ್ಲಿಗೆ ನೇಮಿಸಲಾಗಿದೆ. ಸದರಿ ಅಧಿಕಾರಿಯು ದಿ:2.9.2005ರ ತಮ್ಮ ಮನವಿಯಲ್ಲಿ ಸ್ವಯಂಚಾಲಿತ ವಿಶೇಷ ಬಡ್ತಿ ಮಂಜೂರು ಮಾಡಿದ ನಂತರ ಸಹಾಯಕ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಿ ವೇತನ ನಿಗದಿಪಡಿಸುವಂತೆ ಕೋರಿರುತ್ತಾರೆ.

ಕರ್ನಾಟಕ ನಾಗರೀಕ ಸೇವೆ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು, 1991ರ ನಿಯಮ 3 ರನ್ವಯ ಒಂದೇ ಹುದ್ದೆಯಲ್ಲಿ ತೃಪ್ತಿಕರವಾಗಿ ಜೇಷ್ಠತೆಗೆ ಪರಿಗಣಿಸುವಂತೆ 5 ವರ್ಷಗಳ ಸೇವೆಯನ್ನು ಪೂರೈಸಿ ಪದೋನ್ನತಿಗೆ ಅರ್ಹರಿದ್ದಲ್ಲಿ ಹಿರಿಯ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಅವಕಾಶವನ್ನು ಕಲ್ಪಿಸಲಾಗಿದೆ. 15 ವರ್ಷಗಳ ಸೇವೆ ಪೂರೈಸುವ ಪೂರ್ವದಲ್ಲಿ ಇವರನ್ನು ಸಹಾಯಕ ನಿರ್ದೇಶಕರ ವೃಂದ ಹುದ್ದೆಯ ಸ್ವತಂತ್ರ ಪ್ರಭಾರದಲ್ಲಿರಿಸಿದ್ದು, ನಿಗದಿತ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದು, ಹಿಂದಿನ 5 ವರ್ಷಗಳ ಕಾರ್ಯನಿರ್ವಹಣಾ ವರದಿಗಳು ತೃಪಿಕರವಾಗಿರುವುದರಿಂದ ಸದರಿ ಅಧಿಕಾರಿಗೆ ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ನೀಡಲು ಪರಿಶೀಲಿಸಿ, ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂ:ಮಮಇ/465/ಎಸ್‌ಜೆಡಿ 2004, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2006**

ಶ್ರೀಮತಿ ಸರೋಜಿನಿ ಬಿ. ಕಡೇಮನಿ, ನಿರೂಪಣಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾವೇರಿ ಇವರು ಪರಿವೀಕ್ಷಣಾಧಿಕಾರಿ ದರ್ಜೆ-1 ರಲ್ಲಿ ದಿ:7.5.2001 ರಂದು 15 ವರ್ಷಗಳ ಸೇವೆ ಪೂರೈಸಿರುವುದನ್ನು ಪರಿಗಣಿಸಿ ದಿ:8.5.2001 ರಿಂದ ಜಾರಿಗೆ

ಬರುವಂತೆ ಕರ್ನಾಟಕ ನಾಗರೀಕ ಸೇವೆ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು, 1991ರ ನಿಯಮ 3 ರನ್ವಯ ಹಿರಿಯ ವೇತನ ಶ್ರೇಣಿ ಮಂಜೂರು ಮಾಡಿ, ನಿಯಮ 7 ರನ್ವಯ ವೇತನವನ್ನು ಪುನರ್ ನಿಗದಿಪಡಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 405

ಸರ್ಕಾರದ ಅಧೀನ ಕಾರ್ಯದರ್ಶಿ-2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಸಿ. ನಾಗಯ್ಯ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಅಮಾನತ್ತಿನ ಅವಧಿಯನ್ನು ಇತ್ಯರ್ಥಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 86 ಎಸ್ಇಎನ್ 99 ದಿನಾಂಕ:8.11.01.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 86 ಎಸ್ಇಎನ್ 99 ದಿನಾಂಕ:23.5.02.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 86 ಎಸ್ಇಎನ್ 99 ದಿನಾಂಕ:22.8.05.
4. ನೋಟೀಸ್ ಸಂಖ್ಯೆ:ಸಿಆಸುಇ 86 ಎಸ್ಇಎನ್ 99 ದಿನಾಂಕ:29.8.05.
5. ಶ್ರೀ ಸಿ. ನಾಗಯ್ಯ, ಕೆಎಎಸ್ ಅಧಿಕಾರಿ ಅವರ ದಿ:24.09.05ರ ಉತ್ತರ.

**ಪ್ರಸ್ತಾವನೆ:**

ಶ್ರೀ ಸಿ. ನಾಗಯ್ಯ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು, ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕರ್ನಾಟಕ ಭೂಸ್ವಾಧೀನ ಕಾಯ್ದೆ ಅಡಿಯಲ್ಲಿ 5 ವರ್ಷಗಳ ಹಿಂದೆ ಸ್ವಾಧೀನಪಡಿಸಿಕೊಳ್ಳಲಾಗಿದ್ದ ಬೆಂಗಳೂರು ಉತ್ತರ ತಾಲ್ಲೂಕು ದೊಮ್ಮಲೂರು ಗ್ರಾಮದ ಜಮೀನನ್ನು ತಮಗಿಲ್ಲದ ಅಧಿಕಾರವನ್ನು ಚಲಾಯಿಸಿ ಪರಿಹಾರ ಧನ ಪಡೆದಿದ್ದ ಭೂಮಾಲೀಕರಿಂದ ಪರಿಹಾರ ಧನ ವಾಪಸ್ ಮಾಡಿಸಿಕೊಂಡು ಜಮೀನನ್ನು ಹಿಂದಿರುಗಿಸುವ ಮೂಲಕ ಸರ್ಕಾರದ ನೀತಿ ನಿಯಮಗಳನ್ನು ಉಲ್ಲಂಘಿಸಿದ ಆರೋಪಕ್ಕಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆದು ಮೇಲೆ (3)ರಲ್ಲಿ ಓದಲಾದ ದಿ:22.8.05ರ ಸರ್ಕಾರಿ ಆದೇಶದಲ್ಲಿ ಅವರ ಮುಂದಿನ 3 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು. ಈ ವಿಚಾರಣೆಯನ್ನು ಕಾಯ್ದಿಟ್ಟು ಶ್ರೀ ಸಿ. ನಾಗಯ್ಯ, ಕೆಎಎಸ್ ಅಧಿಕಾರಿ ಅವರನ್ನು ಮೇಲೆ (1)ರಲ್ಲಿ ಓದಲಾದ ದಿ:8.11.01ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಯಿತು. ಹಾಗೂ ಮೇಲೆ (2)ರಲ್ಲಿ ಓದಲಾದ ದಿ:23.5.02ರ ಸರ್ಕಾರಿ ಆದೇಶದಲ್ಲಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ಸದರಿ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲೆ ಕಳೆದ ಅವಧಿಯೆಂದು ಏಕೆ ಪರಿಗಣಿಸಬಾರದೆಂಬುದಕ್ಕೆ ಸಮಜಾಯಿಷಿ ಕೇಳಿ ಅವರಿಗೆ ಮೇಲೆ (4)ರಲ್ಲಿ ಓದಲಾದ ದಿ:29.8.05ರ ನೋಟೀಸ್ ನೀಡಲಾಯಿತು. ಈ ನೋಟೀಸಿಗೆ ಶ್ರೀ ಸಿ. ನಾಗಯ್ಯ ಅವರು ಮೇಲೆ (5)ರಲ್ಲಿ ಓದಲಾದ ದಿ:24.9.05ರ ಉತ್ತರ ಸಲ್ಲಿಸಿ ತಾನು ಈಗಾಗಲೇ ಲಿಖಿತವಾಗಿ ಹೇಳಿರುವ ಕಾರಣವನ್ನು ಅವಲೋಕಿಸಿರುವುದಿಲ್ಲವೆಂದು, ದಿ:13.6.99ರಂದು ಹೊರಡಿಸಿರುವುದು ಆದೇಶವಲ್ಲವೆಂದು ಅದು ಒಂದು ಪತ್ರ ಮಾತ್ರವಾಗಿದ್ದು ಹಾಗೂ ಇದರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವುಂಟಾಗಿಲ್ಲವೆಂದು ಸರ್ಕಾರದ ನಿಯಮಾವಳಿಗಳನ್ನು ಮೀರಿ ದುರ್ನಡತೆ ಎಸಗಿಲ್ಲವಾದ್ದರಿಂದ ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಆಪಾದನೆಗಳಿಂದ ದೋಷಮುಕ್ತನ್ನಾಗಿಸುವಂತೆ ಕೋರಿದ್ದಾರೆ. ಇವರ ಈ ಮನವಿಯನ್ನು ಪರಿಶೀಲಿಸಲಾಗಿ, ಈಗಾಗಲೇ ಇವರು ವಿಚಾರಣಾ ವರದಿಯಲ್ಲಿ ನೀಡಿರುವ ರಕ್ಷಣಾ ಹೇಳಿಕೆಗೂ ಈಗ ಸಲ್ಲಿಸಿರುವ ಕಾರಣಗಳಿಗೂ ವ್ಯತ್ಯಾಸವಿಲ್ಲ. ಈ ಎಲ್ಲಾ ವಾದಗಳನ್ನು ಈಗಾಗಲೇ ಪರಿಶೀಲಿಸಿ ದಂಡನೆ ವಿಧಿಸಲಾಗಿದೆ. ಆದ್ದರಿಂದ ಇವರ ನಿಲಂಭನಾ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಲು ಯಾವುದೇ ಸಮರ್ಥನೀಯ ಕಾರಣಗಳನ್ನು ನೀಡುವಲ್ಲಿ ವಿಫಲರಾಗಿರುವುದನ್ನು ಮನಗಂಡು ಸರ್ಕಾರವು ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 86 ಎಸ್ಇಎನ್ 99, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2005**

ಕರ್ನಾಟಕ ನಾಗರೀಕ ಸೇವಾ ನಿಯಮದ 100(5)ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಸಿ. ನಾಗಯ್ಯ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ತಮ್ಮ ವಿರುದ್ಧ ನಡೆದ ಇಲಾಖಾ ವಿಚಾರಣೆಯ ಸಂಬಂಧ ದಿ:8.11.01 ರಿಂದ ದಿ:23.5.02ರ ಸರ್ಕಾರಿ ಆದೇಶಗಳ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಮೇಲೆ ಕಳೆಯದ ಅವಧಿ (non-duty period) ಎಂದು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾವ್ ಭಂಡಾರಿ**

ಪಿ.ಆರ್. 406

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ದಿವಂಗತ ದೇವರಾಜ ಅರಸು ರವರ ಹೆಸರಿನಲ್ಲಿ ಭವನ ನಿರ್ಮಾಣ ಹಾಗೂ ಜನ್ಮಸ್ಥಳ ಕಲ್ಲಹಳ್ಳಿ ಗ್ರಾಮದ ಸಮಗ್ರ ಅಭಿವೃದ್ಧಿ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಕಇ 454 ಬಿಎಂಎಸ್ 2005 ದಿನಾಂಕ: 8.11.2005.
2. ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಇವರ ಏಕ ಕಡತ ಸಂಖ್ಯೆ ಹಿಂವನಿ/ಸ-3/ಸಿಆರ್-7/2005-06 ದಿನಾಂಕ: 3.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ದಿವಂಗತ ದೇವರಾಜ ಅರಸು ರವರ ಹೆಸರಿನಲ್ಲಿ ಭವನ ನಿರ್ಮಾಣ ಹಾಗೂ ಜನ್ಮಸ್ಥಳ ಕಲ್ಲಹಳ್ಳಿ ಗ್ರಾಮದ ಸಮಗ್ರ ಅಭಿವೃದ್ಧಿ ಕುರಿತು ಕೈಗೊಳ್ಳಬೇಕಾದ ಕಾಮಗಾರಿಗಳ ಕುರಿತಂತೆ ವಿವರವಾದ ಆಯವ್ಯಯ ಹಂಚಿಕೆ ಹಾಗೂ ಕಾಮಗಾರಿಗಳ ವಿವರಗಳನ್ನು ನಮೂದಿಸಿ ರೂ.545.00 ಲಕ್ಷಗಳಿಗೆ ಮಂಜೂರಾತಿ ನೀಡಿದ್ದು ಈ ಕಾಮಗಾರಿಗಳ ಉಸ್ತುವಾರಿಗಾಗಿ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಲು ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿ, ಡಾ. ದೇವರಾಜ ಅರಸ್ ರವರ ಹೆಸರಿನಲ್ಲಿ ಭವನ ನಿರ್ಮಾಣ ಹಾಗೂ ಜನ್ಮಸ್ಥಳ ಕಲ್ಲಹಳ್ಳಿ ಗ್ರಾಮದ ಸಮಗ್ರ ಅಭಿವೃದ್ಧಿ ಕುರಿತು ಕೈಗೊಳ್ಳಬೇಕಾದ ಕಾಮಗಾರಿಗಳ ಉಸ್ತುವಾರಿಗಾಗಿ ಸಮಿತಿ ರಚಿಸಲು ಹಾಗೂ ಕಾಮಗಾರಿಗಳ್ನು ಪ್ರಾರಂಭಿಸಲು ಆರಂಭಿಕವಾಗಿ ರೂ.50.00 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 454 ಬಿಎಂಎಸ್ 2005, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2006**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. 2005-06ನೇ ಸಾಲಿನಲ್ಲಿ ದಿವಂಗತ ದೇವರಾಜ ಅರಸು ರವರ ಹೆಸರಿನಲ್ಲಿ ಭವನ ನಿರ್ಮಾಣ ಹಾಗೂ ಜನ್ಮಸ್ಥಳ ಕಲ್ಲಹಳ್ಳಿ ಗ್ರಾಮದ ಸಮಗ್ರ ಅಭಿವೃದ್ಧಿ ಕುರಿತು ಕೈಗೊಳ್ಳಬೇಕಾದ ಕಾಮಗಾರಿಗಳ ಉಸ್ತುವಾರಿಗಾಗಿ ಕೆಳಕಂಡಂತೆ ಸಮಿತಿ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಜಿಲ್ಲೆಯ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಜಿಲ್ಲೆಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಜಿಲ್ಲಾ ಪಂಚಾಯತ್ | ಉಪಾಧ್ಯಕ್ಷರು |
| 3. | ಶ್ರೀಮತಿ ಚಂದ್ರಪ್ರಭಾ ಅರಸ್, ಮಾಜಿ ಸಚಿವರು ಮತ್ತು ಮಾಜಿ ಸಂಸದರು | ಸದಸ್ಯರು |
| 4. | ಹುಣಸೂರು ತಾಲ್ಲೂಕು ಶಾಸಕರು | ಸದಸ್ಯರು |
| 5. | ಕಾರ್ಯಪಾಲಕ ಅಭಿಯಂತರರು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ | ಸದಸ್ಯರು |
| 6. | ನಿರ್ದೇಶಕರು ದೇವರಾಜ ಅರಸು ಸಂಶೋಧನಾ ಸಂಸ್ಥೆ ಬೆಂಗಳೂರು | ಸದಸ್ಯರು |
| 7. | ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳು | ಸದಸ್ಯ-ಕಾರ್ಯದರ್ಶಿ |

ಹಾಗೂ ಸದರಿ ಕಾಮಗಾರಿಗಳನ್ನು ಕೈಗೊಳ್ಳಲು ಆರಂಭಿಕವಾಗಿ 2005-06ನೇ ಸಾಲಿನಲ್ಲಿ ಪ್ರಾರಂಭಿಸಲು ರೂ.50.00 ಲಕ್ಷಗಳನ್ನು (ಐವತ್ತು ಲಕ್ಷ ರೂ.ಗಳು ಮಾತ್ರ) ಲೆಕ್ಕಶೀರ್ಷಿಕೆ 425-03-800-0-01 ಅಬ್ಜೆಕ್ಟ್ ಕೋಡ್ 386 ರಾಜ್ಯ ವಲಯ ಯೋಜನೆಯಡಿಯಲ್ಲಿ ಕೆಳಕಂಡ ನಿಬಂಧನೆಗಳಿಗೆ ಹಾಗೂ ಷರತ್ತಿಗಳಿಗೆ ಒಳಪಟ್ಟು ಬಿಡುಗಡೆ ಮಾಡಿ ಆದೇಶಿಸಲಾಗಿದೆ.

ಉಲ್ಲೇಖ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ತಿಳಿಸಿರುವಂತೆ ಕಲ್ಲಹಳ್ಳಿ ಗ್ರಾಮದ ಸಮಗ್ರ ಅಭಿವೃದ್ಧಿಗೆ ಸಂಬಂಧಿಸಿದ ಕಾಮಗಾರಿಗಳ ವೆಚ್ಚ ರೂ.100.00 ಲಕ್ಷಗಳಲ್ಲಿ ಹುಣಸೂರು ನಗರ ಸಭೆ ಸ್ಥಳಾಂತರದ ನಂತರ ಪುರ ಭವನವನ್ನು ಸಮೀಕ್ಷಿಸಿ ರೂ.20.00 ಲಕ್ಷಗಳ ವೆಚ್ಚದಲ್ಲಿ ಅರಸುರವರ ಅರ್ಧ ಪ್ರತ್ಥಳಿಯನ್ನು ಸ್ಥಾಪಿಸುವುದು ಸೇರಿರುತ್ತದೆ. ಇದಲ್ಲದೆ, ಹುಣಸೂರಿನಲ್ಲಿ ದೇವರಾಜ್ ಅರಸು ಭವನ ನಿರ್ಮಾಣಕ್ಕೆ ರೂ.25.00 ಲಕ್ಷಗಳಲ್ಲಿ ಕಾಮಗಾರಿ ಕೈಗೊಳ್ಳುವುದಕ್ಕೆ ಸಹ ಪ್ರತ್ಯೇಕವಾಗಿ ಹಣ ಮೀಸಲಿರಿಸಿದೆ. ಈ ಕಾಮಗಾರಿಗಳ ಅನುಮೋದನೆಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿದೆ.

1) ಉಲ್ಲೇಖ (1) ಸರ್ಕಾರಿ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವಂತೆ ಕಾಮಗಾರಿಗಳನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಮೈಸೂರು ಇವರಿಂದ ನಕ್ಷೆ ಮತ್ತು ಅಂದಾಜು ಸಿದ್ದಪಡಿಸಿ, ಕಾಮಗಾರಿ ಅದಕ್ಕೆ ವಹಿಸಬೇಕು.

2) ಸದರಿ ಕಾಮಗಾರಿಗಳನ್ನು ಮೇಲ್ಕಂಡ ಸಮಿತಿಯು ಭವನಗಳ ಸೌಂದರ್ಯ ಹಾಗೂ ಅದರ ಗುಣಮಟ್ಟವನ್ನು ಖಾತರಿಪಡಿಸಿಕೊಳ್ಳುವುದು ಮತ್ತು ಕಾಮಗಾರಿಗಳ ಮೇಲುಸ್ತುವಾರಿ ಮಾಡುವುದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ:ಆಇ 119 ವೆಚ್ಚ-3/06 ದಿನಾಂಕ:1.3.2006ರಲ್ಲಿ ಆರ್ಥಿಕ ಇಲಾಖೆಯು ನೀಡಲಾಗಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎ. ಜಾವಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 407

## ಕಂದಾಯ ಸಚಿವಾಲಯ

**ವಿಷಯ:** ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ಮಿರ್ಜಾನ ಶ್ರೀ ಲಕ್ಷ್ಮೀನಾರಾಯಣ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈ ಬಿಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ಕಂಇ 77 ಮುಸೇವಿ 2003, ದಿನಾಂಕ:30.4.2003.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ.ಏಕರೂಪಶಾಸನ/ಸಿಆರ್/16/2004-05 ದಿನಾಂಕ:12.8.2005 ಮತ್ತು 28.1.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ:(2)ರ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ಶ್ರೀ ಲಕ್ಷ್ಮೀನಾರಾಯಣ ದೇವಸ್ಥಾನದ ನೋಂದಾಯಿತ ದಾಖಲೆಗಳನ್ನು ಪರಿಶೀಲಿಸಿ, ಪಿಟಿಆರ್ ಕಾಲಂನಲ್ಲಿ ಮಿರ್ಜಾನ ಕ್ಷತ್ರಿಯ ಸಮಾಜದವರು ಉನ್ನತಿ ಮಾಡುವುದು, ಆಡಳಿತ ನೋಡುವುದು ಮತ್ತು ಪೂಜೆ ಮಾಡುವುದು ಎಂದು ವರದಿ ಮಾಡಿರುವುದನ್ನು ಪರಿಗಣಿಸಿ, ಧಾರ್ಮಿಕ ದತ್ತಿ ಆಯುಕ್ತರು ಸದರಿ ದೇವಸ್ಥಾನವು ಮಿರ್ಜಾನ ಕ್ಷತ್ರಿಯ ಸಮಾಜಕ್ಕೆ ಸೇರಿರುವುದು ಸ್ಪಷ್ಟವಾಗಿರುವುದರಿಂದ ಈ ದೇವಸ್ಥಾನವನ್ನು ನೂತನ ಕಾಯಿದೆ ಅಧ್ಯಾಯ ಪ್ರಾರಂಭಿಕ 1ರ ಉಪ ನಿಯಮ 4(ii) ರ ಪ್ರಕಾರ ಇಲಾಖಾ ವ್ಯಾಪ್ತಿಯಿಂದ ಹೊರತುಪಡಿಸಿ, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈಬಿಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 115 ಮುಆಬಿ 2004, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2006**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1ರ ಉಪ ನಿಯಮ 4(ii)ರ ಪ್ರಕಾರ "ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ" ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77

ಮುಸೇವಿ 2003 ದಿನಾಂಕ:30.4.2003ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ಮಿರ್ಜಾನ ಗ್ರಾಮದ ಶ್ರೀ ಲಕ್ಷ್ಮೀನಾರಾಯಣದೇವ ದೇವಸ್ಥಾನ ಕ್ರಮ ಸಂಖ್ಯೆ:11, ಪುಟ ಸಂಖ್ಯೆ:732ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 408

**ಕೆ. ಜಯಚಂದ್ರ**

ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ).

**ವಿಷಯ:** ಉತ್ತರ ಕನ್ನಡ ಜಿಲ್ಲೆ, ಭಟ್ಕಳ ತಾಲ್ಲೂಕು, ಬೆಣಂದೂರ ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈ ಬಿಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ಕಂಇ 77 ಮುಸೇವಿ 2003, ದಿನಾಂಕ:30.4.2003.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ.ಏಕರೂಪಶಾಸನ/ಸಿಆರ್/5/2004-05 ದಿನಾಂಕ:11.6.2005 ಮತ್ತು 18.10.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ:(2)ರ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆ, ಭಟ್ಕಳ ತಾಲ್ಲೂಕು, ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನದ ಆಡಳಿತವನ್ನು ಹಾಗೂ ಪೂಜೆಯನ್ನು ಹಿಂದಿನಿಂದಲೂ ವಂಶಪರಂಪರೆಯಾಗಿ ಹವ್ಯಕ ಬ್ರಾಹ್ಮಣ ಸಮಾಜದವರು ನಡೆಸಿಕೊಂಡು ಬಂದಿರುತ್ತಾರೆಂದು ತಿಳಿಸಲಾಗಿದೆ. 1965ರಲ್ಲಿ ಉತ್ತರ ಕನ್ನಡ ಜಿಲ್ಲಾ ನ್ಯಾಯ ಮತ್ತು 1966ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ಉತ್ತರ ಕನ್ನಡ ಜಿಲ್ಲೆ, ಭಟ್ಕಳ ತಾಲ್ಲೂಕು, ಕಿತ್ರೆ ಬೆಣಂದೂರು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನವು ಒಂದು ಸೆಕ್ಷನಲ್ ದೇವಸ್ಥಾನ ಎಂದು ತೀರ್ಪು ನೀಡಿರುವುದರಿಂದ ಸದರಿ ದೇವಸ್ಥಾನವನ್ನು ನೂತನ ಕಾಯಿದೆ ಅಧ್ಯಾಯ 1ರ ಪ್ರಾರಂಭಿಕ 4(ii) ರ ಪ್ರಕಾರ ಇಲಾಖಾ ವ್ಯಾಪ್ತಿಯಿಂದ ಹೊರತುಪಡಿಸಿ, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈಬಿಡಬಹುದೆಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆಂದು ತಿಳಿಸುತ್ತಾ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಮೇಲ್ಕಂಡ ಸಂಸ್ಥೆಯನ್ನು ಕೈಬಿಡಲು ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 84 ಮುಆಬಿ 2004, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2006**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1ರ ಉಪ ನಿಯಮ 4(ii)ರ ಪ್ರಕಾರ "ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ" ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ:30.4.2003ರಲ್ಲಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಕ್ರಮ ಸಂಖ್ಯೆ:40, ಪುಟ ಸಂಖ್ಯೆ:740 ಉತ್ತರ ಕನ್ನಡ ಜಿಲ್ಲೆ, ಭಟ್ಕಳ ತಾಲ್ಲೂಕು, ಚಿತ್ರೆ (Chittre) ಗ್ರಾಮದ ಬೆಂದೂರ (Bendoora Durga Parameshwari Devasthana) ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 409

**ಕೆ. ಜಯಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

**KARNATAKA GOVERNMENT SECRETARIAT**

**CIRCULAR No: SWD/27/BCA/2006, Bangalore, Dated: 2nd February 2006**

**Sub:** Socio Educational & Economic Survey-2006, barring tranfer of personnel drafted for the survey reg.

**Read:**
1. Govt order No. SaKaEe 223 BCA 2005 Dated 29.10.2005.
2. Govt Notification No SaKEe 223 BCA 2005 Dated 13.12.2005.

As contemplated in section 9 of the KSCBC Act 1995, the Karnataka State Commision for Backward Classes has initiated the Socio-economic & educational survey in 2006, in the State during April/May 2006. For his purpose, Government has issued necessary orders vide ref(1) for appointing officers & officials of different departments with specific assignment of duties and responsibilities in the conduct of survey. Further, in the notification cited at ref(2), government has also issued a broad calender of evens for the different activities involved in the survey. The Deputy Commissioners who are the Principal Survey officers need to ensure Pre-survey preparation such as obainng the list of officials; appointing them as resource persons, supervisors, & numerators, formation of enumeration blocks, before the end of Feb, 2006; organize 2 rounds of intensive training vis-a-vis block layout preparation, house listing and canvassing the household schedule, preparing block abstract etc during the middle of March & April, 2006 etc. Even though the house-to-house survey takes place from 20th April, 2006 to 10th May, 2006 the enumerators and supervisors re required to draw block layout maps and do house listing in each block, three days in advance prior to the commencement of the actual survey. Later the enumerators have to revisit he houses wherever necessary to correct and complete the data within two days immediately after completion of the survey.

In this regard except for the members of essential service departments such as Police, Health & Family welfare, and transport, Government desires that staff of all other departments, especially those of

educational institutions should be made available on requisition to the deputy Commissioners of the districts, Commissioners of City Corporation, and Commissioners of CMCs, Tahsildars, chief officers of Town Municipalities/Town Panchayath, in the capacity of the Principal Survey Offier and Charge Officers as the case may be.

Further the following instructions are issued to all Heads of Departments;

1. Lists of Government servants working under them should be arraged to be forwarded to the District / City survey Officer or Charge Officer whenever requested and other head of offices under their control should be instructed similarly to furnish the list of government employees working in their offices and release the personnel selected for the training at the appropriate time.
2. No applications from government servants for exemption from the survey work should be entertained except in emergent cases involving sickness. decisions regarding grant of exemption in deserving cases should be taken in consultation with the appropriate survey officer.
3. No transfer of survey personnel selected for the training and survey work until the end of May, 2006 or completion of the assigned survey work which ever is earlier should be ordered under exceptional circumstances. The Principal Survey Officer of the district / City Corporation and concerned Charge Officer should be kept informed of any such transfers.
4. Strict instructions should be issued to the sub ordinate officers to follow the instructions of the District Survey Officer and Survey charge officer, and it must be impressed upon all concerned that any negligence in the performance of survey duties will be considered dereliction of duty and will be dealt with suitably under the relevant provisions of the KCS (CCA) Rules.

In order to ensure that the survey work is accomplished without any kind of hindrance, Heads of Departments and other organisations are requested to implement these instructions fully and scrupulously.

All concerned should furnish the lists of the officials who are working under them and relieve such of them who are drafted for training, enumeration work etc., connected with Survey - 2006. Failre to comply with these instructions will be viewed seriously and may entail disciplinary action.

**B.K. DAS**

P.R. 410 Chief Secretary to Government of Karnataka

**ಗ್ರಾಮೀಣಾಭಿವೃದಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ತಿದ್ದುಪಡಿ ಆದೇಶ ಸಂ:ಗ್ರಾಅಪ:135:ಆರ್‌ಆರ್‌ಸಿ:2005, ಬೆಂಗಳೂರು, ದಿನಾಂಕ:24ನೇ ಫೆಬ್ರವರಿ 2006**

**ವಿಷಯ:** ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ-ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯಲ್ಲಿ ಮುಖ್ಯ ಲೆಕ್ಕಾಧಿಕಾರಿಗಳ ಹುದ್ದೆಯನ್ನು ಸೃಜಿಸುವ ಬಗ್ಗೆ - ಸದರಿ ಹುದ್ದೆಯನ್ನು ಆರ್ಥಿಕ ನಿಯಂತ್ರಕರ ಹುದ್ದೆಯಾಗಿ ಮಾರ್ಪಾಡು ಮಾಡುವ ಬಗ್ಗೆ.

ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ ಮಾರ್ಗಸೂಚಿಯ ಪ್ರಕಾರ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ರಾಜ್ಯ ಮಟ್ಟದಲ್ಲಿ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯನ್ನು ಸಚಿವ ಸಂಪುಟದ ಅನುಮೋದನೆಯಂತೆ ಸ್ಥಾಪಿಸಿ, ಕರ್ನಾಟಕ ಸೊಸೈಟಿಗಳ ನೊಂದಣಿ ಕಾಯಿದೆ - 1960 ರಡಿಯಲ್ಲಿ ನೊಂದಾಯಿಸಿದೆ. ಈ ಸಂಸ್ಥೆಯ ಹಣಕಾಸು ವಿಭಾಗಕ್ಕೆ ಒಂದು ಮುಖ್ಯ ಲೆಕ್ಕಾಧಿಕಾರಿಗಳ ಹುದ್ದೆಯನ್ನು ಆದೇಶ ಸಂಖ್ಯೆಗ್ರಾಅಪ:135: ಆರ್‌ಆರ್‌ಸಿ:2005, ದಿನಾಂಕ:11.10.2005 ರಲ್ಲಿ ಸೃಜಿಸಲಾಗಿತ್ತು. ಕೇಂದ್ರ ಸರ್ಕಾರದಲ್ಲಿನ ರಾಷ್ಟ್ರೀಯ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯಲ್ಲಿ ಹಣಕಾಸು ವಿಭಾಗದ ಮುಖ್ಯಸ್ಥರ ಹುದ್ದೆಯ ಪದನಾಮವು 'ಆರ್ಥಿಕ ನಿಯಂತ್ರಕರು' ಎಂಬುದಾಗಿದ್ದು, ಅದರಂತೆ ರಾಜ್ಯ ಮಟ್ಟದ ಸಂಸ್ಥೆಯ ಹಣಕಾಸು ವಿಭಾಗದ ಮುಖ್ಯಸ್ಥರ ಹುದ್ದೆಯ ಪದನಾಮವು 'ಆರ್ಥಿಕ ನಿಯಂತ್ರಕರು' ಎಂದು ಇರಬೇಕಾಗಿದೆ. ಕರಡು ಸಚಿವ ಸಂಪುಟದಲ್ಲಿ ಆರ್ಥಿಕ ಇಲಾಖೆಯ ಟಿಪ್ಪಣಿ ಕಂಡಿಕೆ ಸಂಖ್ಯೆ:ಆಇ:918:ವೆಚ್ಚ-6:2005 ದಿ:25.5.2005ಲ್ಲಿ ಪ್ರಸ್ತಾವಿಸಿದಂತೆ, ಸಂಸ್ಥೆಯಲ್ಲಿ ಸುಗಮವಾಗಿ ಕಾರ್ಯಕ್ರಮ ಅನುಷ್ಠಾನಕ್ಕಾಗಿ ಆರ್ಥಿಕ ನಿಯಂತ್ರಕರ ಹುದ್ದೆ ಬೇಕಾದಲ್ಲಿ ಅದನ್ನು ಸೃಜಿಸಬಹುದೆಂದು ತಿಳಿಸಿರುತ್ತದೆ.

ಆದುದರಿಂದ, ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯಲ್ಲಿ ಈಗಾಗಲೇ ಸೃಜಿಸಿರುವ ಮುಖ್ಯ ಲೆಕ್ಕಾಧಿಕಾರಿ ಹುದ್ದೆಯ ಪದನಾಮವನ್ನು ಮಾರ್ಗಸೂಚಿಯಂತೆ "ಆರ್ಥಿಕ ನಿಯಂತ್ರಕರು" ಎಂದು ಮಾರ್ಪಡಿಸಿದ್ದು, ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ಕಾಮಗಾರಿಗಳ ಎಲ್ಲಾ ಉದ್ದೇಶಗಳಿಗೂ ಅದರಂತೆ ಇನ್ನು ಮುಂದೆ ಓದಿಕೊಳ್ಳತಕ್ಕದ್ದು.

**ಎನ್. ಮಂಜುಳ**

ನಿರ್ದೇಶಕರು,

ಪಿ.ಆರ್. 411 ಗ್ರಾಮೀಣ ಮೂಲಭೂತ ಸೌಲಭ್ಯಗಳು ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾತ್ ರಾಜ್ ಇಲಾಖೆ.

**ತಿದ್ದುಪಡಿ ಆದೇಶ ಸಂ:ಗ್ರಾಅಪ:135:ಆರ್‌ಆರ್‌ಸಿ:2005, ಬೆಂಗಳೂರು, ದಿನಾಂಕ:22ನೇ ಫೆಬ್ರವರಿ 2006**

**ವಿಷಯ:** ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ-ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯ ಅಧಿಕಾರಿ-ಸಿಬ್ಬಂದಿ ನೇಮಕಾತಿ ಬಗ್ಗೆ.

ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ:135:ಆರ್‌ಆರ್‌ಸಿ:2005, ದಿನಾಂಕ:14.10.2005ರಲ್ಲಿ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯ ಹಣಕಾಸು ವಿಭಾಗಕ್ಕೆಂದು ಒಂದು ಲೆಕ್ಕಾಧಿಕಾರಿ ಹುದ್ದೆಯನ್ನು ಮತ್ತು ಮೂರು ಲೆಕ್ಕ ಪರಿಶೋಧಕರ ಹುದ್ದೆಗಳನ್ನು ಮಂಜೂರು ಮಾಡಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಿಂದ ಸ್ಥಳಾಂತರಿಸಿ ತುಂಬಲು ಆದೇಶಿಸಲಾಗಿತ್ತು. ಮೇಲ್ದರ್ಜೆಯ ಹೆಚ್ಚಿನ ಜವಾಬ್ದಾರಿಯ ಒಂದು ಲೆಕ್ಕಾಧಿಕಾರಿ ಹುದ್ದೆ (ವೇತನ ಶ್ರೇಣಿ 7400-13120)ಯು ಸಂಸ್ಥೆಗೆ ಅಗತ್ಯವಿರುವುದಿಲ್ಲವಾದ್ದರಿಂದ ಹಾಗೂ ಪ್ರಸ್ತುತ ಈ ಹುದ್ದೆಯು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ಲಭ್ಯವಿರುವುದಿಲ್ಲವಾದ್ದರಿಂದ ಸದರಿ ಒಂದು ಲೆಕ್ಕಾಧಿಕಾರಿ ಹುದ್ದೆಯನ್ನು "ಲೆಕ್ಕಪರಿಶೋಧನಾಧಿಕಾರಿ" ಹುದ್ದೆ ಎಂದು ಕೆಳದರ್ಜೆಗಿಳಿಸಿ ಮಾರ್ಪಡಿಸಲಾಗಿದೆ. ಸದರಿ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಕೇಂದ್ರ ಕಛೇರಿಯಿಂದ ಸ್ಥಳಾಂತರಿಸಿ ತುಂಬುವುದು.

ಮೇಲ್ಕಂಡಂತೆಯೇ ಮೇಲ್ದರ್ಜೆಯ ಹೆಚ್ಚಿನ ಜವಾಬ್ದಾರಿಯ ಮೂರು ಲೆಕ್ಕ ಪರಿಶೋಧಕರ ಹುದ್ದೆ (ವೇತನ ಶ್ರೇಣಿ ರೂ.6000-11200)ಗಳನ್ನು "ಪ್ರಥಮ ದರ್ಜೆ ಲೆಕ್ಕಸಹಾಯಕರ" ಹುದ್ದೆಗಳಾಗಿ (ವೇತನ ಶ್ರೇಣಿ ರೂ.3850-7050) ಕೆಳದರ್ಜೆಗಿಳಿಸಿ ಮಾರ್ಪಡಿಸಲಾಗಿದೆ. ಸದರಿ ಹುದ್ದೆಗಳಲ್ಲಿ ಒಂದು ಪ್ರಥಮ ದರ್ಜೆ ಲೆಕ್ಕಸಹಾಯಕರ ಹುದ್ದೆಯನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಕೇಂದ್ರ ಕಛೇರಿಯಿಂದಲೂ ಇನ್ನೆರಡು ಪ್ರಥಮ ದರ್ಜೆ ಲೆಕ್ಕಸಹಾಯಕರ ಹುದ್ದೆಗಳನ್ನು ಬೆಳಗಾವಿ ಮತ್ತು ಗುಲ್ಬರ್ಗ ವೃತ್ತ ಕಛೇರಿಯಿಂದ ತಲಾ ಒಂದು ಹುದ್ದೆಯಂತೆ ಸ್ಥಳಾಂತರಿಸಿ ತುಂಬುವುದು.

ಈ ಹುದ್ದೆಯ ಪದನಾಮಗಳ ತಿದ್ದುಪಡಿ ಮಾಡಿದಂತೆ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ಕಾಮಗಾರಿಗಳ ಎಲ್ಲಾ ಉದ್ದೇಶಗಳಿಗೂ ಅದರಂತೆ ಇನ್ನು ಮುಂದೆ ಓದಿಕೊಳ್ಳತಕ್ಕದ್ದು.

**ಎನ್. ಮಂಜುಳ**
ನಿರ್ದೇಶಕರು,
ಗ್ರಾಮೀಣ ಮೂಲಭೂತ ಸೌಲಭ್ಯಗಳು ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 412

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ತಿದ್ದೋಲೆ ಸಂಖ್ಯೆ: ಸಿಆಸುಇ 63 ಎಸ್‌ಇಎನ್ 04, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2006**

ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 3 ಎಸ್‌ಇಎನ್ 2004 ದಿ:7.2.2006 ರಲ್ಲಿನ ಆದೇಶ ಭಾಗದ ನಾಲ್ಕನೇ ಮತ್ತು ಐದನೇ ಸಾಲಿನಲ್ಲಿ "ವೇತನ ಶ್ರೇಣಿ ರೂ.7400-13120" ಎಂಬುದರ ಬದಲಾಗಿ "ವೇತನ ಶ್ರೇಣಿ ರೂ.10620-14960" ಎಂಬುದಾಗಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

ಪಿ.ಆರ್. 413

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಡೆಂಡಮ್ ಸಂಖ್ಯೆ: ಆಕುಕ 37 ಎಂಎಂಸಿ 2006, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2006**

ದಿನಾಂಕ:20.10.2005 ಸಂಖ್ಯೆ:ಆಕುಕ 2 ಎಂಸಿಎಲ್ 2005ರ ಸರ್ಕಾರಿ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ನಿಯೋಜನೆ ಮೇಲಿರುವ 69 ಉಪನ್ಯಾಸಕರುಗಳನ್ನು ಅನುಬಂಧ-1 ಮತ್ತು 2 ರಲ್ಲಿರುವಂತೆ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ವಿಲೀನಗೊಳಿಸಿ ಆದೇಶಿಸಲಾಗಿದೆ. ಸದರಿ ಆದೇಶದ ಅನುಬಂಧ 2ರ ಕ್ರಮ ಸಂಖ್ಯೆ: 5ರ ನಂತರ ಕ್ರಮ ಸಂಖ್ಯೆ: 6ರಲ್ಲಿ ಈ ಕೆಳಕಂಡ ವೈದ್ಯರ ಹೆಸರನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು. ದಿನಾಂಕ:20.10.2005ರ ಆದೇಶದ ಷರತ್ತು ಹಾಗೂ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ ಮತ್ತು ಯಥಾವತ್ತಾಗಿ ಜಾರಿಗೊಳ್ಳುತ್ತವೆ.

**ದಿನಾಂಕ:20.10.2005ರ ಸಂಖ್ಯೆ:ಆಕುಕ 2 ಎಂಸಿಎಲ್ 2005ರ ಸರ್ಕಾರಿ ಆದೇಶದ ಅನುಬಂಧ-2ಕ್ಕೆ ಸೇರ್ಪಡೆ**

| ಕ್ರ. ಸಂ. | ಹೆಸರು ಮೂಲ ಇಲಾಖೆಯಲ್ಲಿ ಹೊಂದಿರುವ ಪದನಾಮ ಮತ್ತು ಇಲಾಖೆ | ನಿಯೋಜನೆ ಮೇಲೆ ಹೊಂದಿರುವ ಹುದ್ದೆಯ ಪದನಾಮ ಮತ್ತು ಕಾಲೇಜು | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನಿಯೋಜನೆ ಮೇಲೆ ಉಪನ್ಯಾಸಕರಾಗಿ ನೇಮಕಗೊಂಡ ದಿನಾಂಕ | ವಿಲೀನಗೊಂಡ ಹುದ್ದೆಯ ಹೆಸು ಪದನಾಮ ಮತ್ತು ಕಾಲೇಜು |
|---|---|---|---|---|---|---|
| | | | **ಪಿಡೋಡಾಂಷಿಯಾ** | | | |
| 6 | ಡಾ:ಎಸ್.ಕೆ. ಶ್ರೀನಾಥ್ ದಂತ ವೈದ್ಯಾಧಿಕಾರಿ ಸರ್ಕಾರಿ ದಂತ ವೈದ್ಯಕೀಯ ಕಾಲೇಜು, ಬೆಂಗಳೂರು | ಪಿಡೋಡಾಂಷಿಯಾ ಉಪನ್ಯಾಸಕರು, ಸರ್ಕಾರಿ ದಂತ ವೈದ್ಯಕೀಯ ಕಾಲೇಜು, ಬೆಂಗಳೂರು | 1.6.1973 | 6.9.2000 ಮತ್ತು 5.8.2005 | 31.8.01 | ಪಿಡೋಡಾಂಷಿಯಾ ಉಪನ್ಯಾಸಕರು, ಸರ್ಕಾರಿ ದಂತ ವೈದ್ಯಕೀಯ ಕಾಲೇಜು, ಬೆಂಗಳೂರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 414

## ಆರ್ಥಿಕ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಎಫ್‌ಡಿ 64 ಇಎಫ್‌ಎಲ್ 2004(1), ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2006**

ದಿನಾಂಕ: 18.1.2006ರ ಸರ್ಕಾದ ಆದೇಶ ಸಂಖ್ಯೆ:ಎಫ್‌ಡಿ 43 ಇಎಫ್‌ಎಲ್ 2005 ರನ್ವಯ ಮದ್ಯಸಾರ ಆಧಾರಿತ ರಾಸಾಯನಿಕ ಕೈಗಾರಿಕೆಗಳಿಗೆ ಮದ್ಯಸಾರವನ್ನು ವಿತರಿಸಲು ಹೈಪವರ್ ಕಮಿಟಿಯನ್ನು ಪುನರ್‌ರಚಿಸಲಾಗಿರುವ ಆದೇಶ ಭಾಗದ ಕ್ರಮ ಸಂಖ್ಯೆ 5ರಲ್ಲಿ "ಅಬಕಾರಿ ಜಂಟಿ ಆಯುಕ್ತರು (ಡಿ ಮತ್ತು ಬಿ), ಅಬಕಾರಿ ಆಯುಕ್ತರ ಕಚೇರಿ, ಬೆಂಗಳೂರು-ಸದಸ್ಯ ಕಾರ್ಯದರ್ಶಿ" ಇದರ ಬದಲಿಗೆ "ಶ್ರೀ ಕೆ.ಎಲ್. ಲೋಕನಾಥ, ಸರ್ಕಾರದ ಜಂಟಿ ಕಾರ್ಯದರ್ಶಿ (ಆಡಳಿತ) ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು-ಸದಸ್ಯ ಕಾರ್ಯದರ್ಶಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕೋದಂಡರಾಮ ಗೌಡ**

ಪಿ.ಆರ್. 415

ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ).

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಗದಗ ಜಿಲ್ಲೆಯ ಮುಂಡರಗಿಯ ವಿನೂತನ ಶಿಕ್ಷಣ ಸಂಸ್ಥೆಯ ಮುಂಡರಗಿಯ ಪ್ರಿಯದರ್ಶಿನಿ ಶಿಕ್ಷಣ ಮಹಾವಿದ್ಯಾಲಯಕ್ಕೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ

**ಉಲ್ಲೇಖ:**
1. ದಿನಾಂಕ:27.12.2003ರ ಸಂ. ಇಡಿ 241 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ:21.12.2005, ಸಂಖ್ಯೆ: F.SRO/NCTE/B.Ed/2005-06/4842ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:23.2.2006ರ ಪ್ರಾಂಶುಪಾಲರು, ಪ್ರಿಯದರ್ಶಿನಿ ಶಿಕ್ಷಣ ಮಹಾ ವಿದ್ಯಾಲಯ, ಮುಂಡರಗಿ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಸಲಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳಿಗೆ ಪ್ರವೇಶಕ್ಕೆ ಅಭ್ಯರ್ಥಿಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಗದಗ ಜಿಲ್ಲೆಯ ಮುಂಡರಗಿಯ ವಿನೂತನ ಶಿಕ್ಷಣ ಸಂಸ್ಥೆಯ ಮುಂಡರಗಿಯ ಪ್ರಿಯದರ್ಶಿನಿ ಶಿಕ್ಷಣ ಮಹಾವಿದ್ಯಾಲಯಕ್ಕೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:27.2.2006ರ ಪತ್ರದಲ್ಲಿ ಸದರಿ ಟ್ರಸ್ಟ್‌ನ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 24 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಗದಗ ಜಿಲ್ಲೆಯ ಮುಂಡರಗಿಯ ವಿನೂತನ ಶಿಕ್ಷಣ ಸಂಸ್ಥೆಯ ಮುಂಡರಗಿಯ ಪ್ರಿಯದರ್ಶಿನಿ ಮಹಾವಿದ್ಯಾಲಯದ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 416

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಧಾರವಾಡದ ಸೋನಿಯಾ ಎಜುಕೇಷನ್ ಟ್ರಸ್ಟ್‌ನ ಧಾರವಾಡದಲ್ಲಿನ ಸೋನಿಯಾ ಎಜುಕೇಷನ್ ಟ್ರಸ್ಟ್ ಶಿಕ್ಷಣ ಮಹಾವಿದ್ಯಾಲಯಕ್ಕೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:**
1. ದಿನಾಂಕ:27.12.2003ರ ಸಂ. ಇಡಿ 253 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ:21.12.2005, ಸಂಖ್ಯೆ: F.SRO/NCTE/B.Ed/2005-06/4832ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:27.2.2006ರ ಕಾರ್ಯದರ್ಶಿ, ಸೋನಿಯಾ ಎಜುಕೇಷನ್ ಟ್ರಸ್ಟ್, ಧಾರವಾಡ, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಸಲಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳಿಗೆ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಧಾರವಾಡದ ಸೋನಿಯಾ ಎಜುಕೇಷನ್ ಟ್ರಸ್ಟ್‌ನ ಧಾರವಾಡದಲ್ಲಿನ ಸೋನಿಯಾ ಎಜುಕೇಷನ್ ಟ್ರಸ್ಟ್, ಶಿಕ್ಷಣ ಮಹಾವಿದ್ಯಾಲಯಕ್ಕೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:27.2.2006ರ ಪತ್ರದಲ್ಲಿ ಸದರಿ ಟ್ರಸ್ಟ್‌ನ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 25 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಧಾರವಾಡದ ಸೋನಿಯಾ ಎಜುಕೇಷನ್ ಟ್ರಸ್ಟ್‌ನ ಧಾರವಾಡದಲ್ಲಿನ ಸೋನಿಯಾ ಎಜುಕೇಷನ್ ಟ್ರಸ್ಟ್ ಶಿಕ್ಷಣ ಮಹಾವಿದ್ಯಾಲಯದ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 417

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ, (ವಿಶ್ವವಿದ್ಯಾಲಯಗಳು)

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿ ಸಚಿವಾಲಯದಲ್ಲಿ 'ಬಿ' ಮತ್ತು 'ಸಿ' ಕಡತಗಳ ಗಣಕೀಕರಣವನ್ನು 2003ನೇ ಸಾಲಿನಲ್ಲಿ ನಡೆಸಿದ ಬಾಬ್ತು ಮೊತ್ತ ರೂ.5,59,998/- ನ್ನು ಬಿಡುಗಡೆ ಮಾಡುವ ಕರಿತು.

**ಓದಲಾಗಿದೆ:** ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶಕರ ಪತ್ರದ ಸಂಖ್ಯೆ: ಎಆರ್‌ಎಸ್ 15 ಎಡಿಎಂ 2005 ದಿನಾಂಕ: 13.3.2006 ಮತ್ತು ಎಆರ್‌ಎಸ್ 15 ಎಡಿಎಂ 2006 ದಿನಾಂಕ: 15.3.2006.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ರವರ ದಿನಾಂಕ:13.3.2006ರ ಪತ್ರದಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿ ಸಂಗ್ರಹಿಸಿರುವ ಸಚಿವಾಲಯದ 'ಬಿ' ಮತ್ತು 'ಸಿ' ಕಡತಗಳ ಗಣಕೀಕರಣ ಕಾರ್ಯವನ್ನು ಮೆ: ಪಿ.ಪಿ.ಇ. ಪಾಲ್ಟ್ರಾನಿಕ್ಸ್ ಸಂಸ್ಥೆಯವರು 2003ರಲ್ಲಿ ಗಣಕೀಕರಿಸಿದ್ದು ಈ ಕಾರ್ಯವನ್ನು ತೃಪ್ತಿಕರವಾಗಿ ನಿರ್ವಹಿಸಿದ್ದಾರೆಂದು ದಿನಾಂಕ:15.3.2006ರ ಪತ್ರದಲ್ಲಿ ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ರವರು ದೃಢೀಕರಿಸಿರುತ್ತಾರೆ.

ಒಟ್ಟು 70440 ದಾಖಲೆಗಳ ಗಣಕೀಕರಣ ಕಾರ್ಯವಾಗಿದ್ದು ಪ್ರತಿ ದಾಖಲೆಗೆ ರೂ.7.95 ಪೈಸೆಯಂತೆ ಒಟ್ಟು ರೂ.5,59,998/- (ಐದು ಲಕ್ಷ ಐವತ್ತೊಂಭತ್ತು ಸಾವಿರದ ಒಂಭೈನೂರ ತೊಂಭತ್ತೆಂಟು ರೂಪಾಯಿಗಳು ಮಾತ್ರ) ಗಳನ್ನು ಸದರಿ ಸಂಸ್ಥೆಯವರಿಗೆ ಬಿಡುಗಡೆ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-ಕಲೆ ಮತ್ತು ಸಂಸ್ಕೃತಿ-104-ಪತ್ರಾಗಾರ-01-ರಾಜ್ಯ ಪತ್ರಾಗಾರ ಘಟಕ-059-ಇತರೆ ಖರ್ಚು (ಯೋಜನೆ)ಯಲ್ಲಿ 2005-06ನೇ ಸಾಲಿನ ಆಯವ್ಯಯದಡಿ ಕಾಯ್ದಿರಿಸಿದ ರೂ.5.6 ಲಕ್ಷಗಳಿಂದ ಭರಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಪತ್ರಾಗಾರ ಇಲಾಖಾ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 2 ರಾಪಸ 2006, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2003ನೇ ಸಾಲಿನಲ್ಲಿ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿನ ಸಚಿವಾಲಯದ 'ಬಿ' ಮತ್ತು 'ಸಿ' ಕಡತಗಳ 70,440 ದಾಖಲೆಗಳಿಗೆ ಪ್ರತಿ ದಾಖಲೆಗೆ ರೂ.7.95 ಪೈಸೆಯಂತೆ ರೂ.5,59,998/- (ಐದು ಲಕ್ಷ ಐವತ್ತೊಭತ್ತು ಸಾವಿರದ ಒಂಭೈನೂರ ತೊಂಭತ್ತೆಂಟು ರೂಪಾಯಿಗಳು ಮಾತ್ರ) ಮೆ: ಪಿ.ಪಿ.ಇ. ಪಾಲ್ಟ್ರಾನಿಕ್ಸ್ ಸಂಸ್ಥೆ, ಬೆಂಗಳೂರು ಇವರಿಗೆ ಪಾವತಿಸಲು ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ರವರಿಗೆ ಈ ಮೂಲಕ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-ಕಲೆ ಮತ್ತು ಸಂಸ್ಕೃತಿ-104-ಪತ್ರಾಗಾರ-01-ರಾಜ್ಯ ಪತ್ರಾಗಾರ ಘಟಕ-059-ಇತರೆ ಖರ್ಚು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 418

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿ ಸಚಿವಾಲಯದಲ್ಲಿ 'ಬಿ' ಮತ್ತು 'ಸಿ' ಕಡತಗಳ ಗಣಕೀಕರಣವನ್ನು 2003ನೇ ಸಾಲಿನಲ್ಲಿ ನಡೆಸಿದ ಬಾಬ್ತು ಮೊತ್ತ ರೂ.5,59,998/- ನ್ನು ಬಿಡುಗಡೆ ಮಾಡುವ ಕರಿತು.

**ಓದಲಾಗಿದೆ:** ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶಕರ ಪತ್ರದ ಸಂಖ್ಯೆ: ಎಆರ್‌ಎಸ್ 15 ಎಡಿಎಂ 2005 ದಿನಾಂಕ: 13.3.2006 ಮತ್ತು ಎಆರ್‌ಎಸ್ 15 ಎಡಿಎಂ 2006 ದಿನಾಂಕ: 15.3.2006.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ರವರ ದಿನಾಂಕ:13.3.2006ರ ಪತ್ರದಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿ ಸಂಗ್ರಹಿಸಿರುವ ಸಚಿವಾಲಯದ 'ಬಿ' ಮತ್ತು 'ಸಿ' ಕಡತಗಳ ಗಣಕೀಕರಣ ಕಾರ್ಯವನ್ನು ಮೆ: ಪಿ.ಪಿ.ಇ. ಪಾಲ್ಟ್ರಾನಿಕ್ಸ್ ಸಂಸ್ಥೆಯವರು 2003ರಲ್ಲಿ ಗಣಕೀಕರಿಸಿದ್ದು ಈ ಕಾರ್ಯವನ್ನು ತೃಪ್ತಿಕರವಾಗಿ ನಿರ್ವಹಿಸಿದ್ದಾರೆಂದು ದಿನಾಂಕ:15.3.2006ರ ಪತ್ರದಲ್ಲಿ ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆರವರು ದೃಢೀಕರಿಸಿರುತ್ತಾರೆ.

ಒಟ್ಟು 70440 ದಾಖಲೆಗಳ ಗಣಕೀಕರಣ ಕಾರ್ಯವಾಗಿದ್ದು ಪ್ರತಿ ದಾಖಲೆಗೆ ರೂ.7.95 ಪೈಸೆಯಂತೆ ಒಟ್ಟು ರೂ.5,59,998/- (ಐದು ಲಕ್ಷ ಐವತ್ತೊಂಭತ್ತು ಸಾವಿರದ ಒಂಭೈನೂರ ತೊಂಭತ್ತೆಂಟು ರೂಪಾಯಿಗಳು ಮಾತ್ರ) ಗಳನ್ನು ಸದರಿ ಸಂಸ್ಥೆಯವರಿಗೆ ಬಿಡುಗಡೆ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-ಕಲೆ ಮತ್ತು ಸಂಸ್ಕೃತಿ-104-ಪತ್ರಾಗಾರ-01-ರಾಜ್ಯ ಪತ್ರಾಗಾರ ಘಟಕ-059-ಇತರೆ ಖರ್ಚು (ಯೋಜನೆ)ಯಲ್ಲಿ 2005-06ನೇ ಸಾಲಿನ ಆಯವ್ಯಯದಡಿ ಕಾಯ್ದಿರಿಸಿದ ರೂ.5.6 ಲಕ್ಷಗಳಿಂದ ಭರಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಪತ್ರಾಗಾರ ಇಲಾಖಾ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 3 ರಾಪಸ 2006, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2003ನೇ ಸಾಲಿನಲ್ಲಿ ರಾಜ್ಯ ಪತ್ರಾಗಾರ ನಿರ್ದೇಶನಾಲಯದಲ್ಲಿನ ಸಚಿವಾಲಯದ 'ಬಿ' ಮತ್ತು 'ಸಿ' ಕಡತಗಳ 70,440 ದಾಖಲೆಗಳಿಗೆ ಪ್ರತಿ ದಾಖಲೆಗೆ ರೂ.7.95 ಪೈಸೆಯಂತೆ ರೂ.5,59,998/- (ಐದು ಲಕ್ಷ ಐವತ್ತೊಂಭತ್ತು ಸಾವಿರದ ಒಂಭೈನೂರ ತೊಂಭತ್ತೆಂಟು ರೂಪಾಯಿಗಳು ಮಾತ್ರ) ಮೆ: ಪಿ.ಪಿ.ಇ. ಪಾಲ್ಟ್ರಾನಿಕ್ಸ್ ಸಂಸ್ಥೆ, ಬೆಂಗಳೂರು ಇವರಿಗೆ ಪಾವತಿಸಲು ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ರವರಿಗೆ ಈ ಮೂಲಕ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-ಕಲೆ ಮತ್ತು ಸಂಸ್ಕೃತಿ-104-ಪತ್ರಾಗಾರ-01-ರಾಜ್ಯ ಪತ್ರಾಗಾರ ಘಟಕ-059-ಇತರೆ ಖರ್ಚು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96 ರಲ್ಲಿ ಇಲಾಖಾ ಕಾರ್ಯದರ್ಶಿಯರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 419

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸೈಯದ್ ರಹಮತ್‌ವುಲ್ಲಾ ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇದರ ಕರ್ತವ್ಯ ಲೋಪತೆ ಸಂಬಂಧ ಮಾನ್ಯ ಲೋಕಾಯುಕ್ತರವರಿಂದ ವಿಚಾರಣೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಉಪ ಲೋಕಾಯುಕ್ತ ಕರ್ನಾಟಕ ರಾಜ್ಯ ಇವರ ಪತ್ರ ಸಂಖ್ಯೆ: Coup Duplo K/BCD-115/2000-01/Dt 31.1.2006
2. ರಿಜಿಸ್ಟ್ರಾರ್ ಕರ್ನಾಟಕ ಲೋಕಾಯುಕ್ತ ಬೆಂಗಳೂರು, ರವರ ದಿನಾಂಕ:6.2.2006ರ ಅರೆಸರ್ಕಾರಿ ಪತ್ರದ ಸಂಖ್ಯೆ: ಸಿಓಎಂಪಿಟಿ/ಉಪ-ಲೋಕಾಯುಕ್ತ/ವಿಸಿಡಿ.115/2000-01/ಎಆರ್‌ಇ-11.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 1 ಮತ್ತು (2)ರ ರಿಜಿಸ್ಟ್ರಾರ್ ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರದಲ್ಲಿ "ಶ್ರೀ ಸೈಯದ್ ರೆಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಹಿಂದೆ ತಾಲ್ಲೂಕು ಕೈಗಾರಿಕಾ ಕೇಂದ್ರ, ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು(ನಗರ) ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಇವರು ಶ್ರೀ ಎಸ್. ಜಾಫರ್ ಆಲಿ ಎಂಬುವವರಿಗೆ ಎಸ್.ಎಸ್.ಐ. ಘಟಕ ಸ್ಥಾಪನೆಗೆ ಸಣ್ಣ ಪ್ರಮಾಣದ ಕೈಗಾರಿಕಾ ಪ್ರಮಾಣ ಪತ್ರ ನೀಡುವ ಮುನ್ನ ಈ ರೀತಿ ಪ್ರಮಾಣ ಪತ್ರ ನೀಡಬಾರದೆಂದು ಆಕ್ಷೇಪಣೆನ್ನು ಶ್ರೀ ಎಸ್.ಟಿ. ಶ್ರೀನಿವಾಸ್ ಎಂಬುವವರು ನೀಡಿದ್ದರೂ ಸಹ ಶ್ರೀ ಸೈಯದ್ ರಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ ರವರು ಇದನ್ನು ಪರಿಗಣಿಸದೆ ಎಸ್. ಜಫರ್ ಆಲಿ ಇವರಿಗೆ ಎಸ್.ಎಸ್.ಐ. ಘಟಕಕ್ಕೆ ಸಣ್ಣ ಪ್ರಮಾಣದ ಕೈಗಾರಿಕಾ ಪ್ರಮಾಣ ಪತ್ರವನ್ನು ನೀಡಿರುತ್ತಾರೆ. ಈ ಬಗ್ಗೆ ಲೋಕಾಯುಕ್ತ ಕಛೇರಿಗೆ ಶ್ರೀ ಎಸ್.ಟಿ. ಶ್ರೀನಿವಾಸ್ ಇವರು ನೀಡಿದ ದೂರಿನ ಹಿನ್ನೆಲೆಯಲ್ಲಿ ಲೋಕಾಯುಕ್ತವು ಈ ದೂರಿನ ಬಗ್ಗೆ ಪೂರ್ವಬಾವಿ ತನಿಖೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಈ ವರದಿಯಲ್ಲಿ ನೀಡುತ್ತಾ ಶ್ರೀ ಸೈಯದ್ ರಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ ಇವರು ಈ ಹಿಂದೆ ತಾಲ್ಲೂಕು ಕೈಗಾರಿಕಾ ಕೇಂದ್ರ, ಬೆಂಗಳೂರು (ನಗರ) ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಮೇಲ್ಕಂಡ ಆರೋಪಕ್ಕೆ ಸಂಬಂಧಿಸಿದಂತೆ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14-ಎ ಪ್ರಕಾರ, ಈ ವಿಚಾರಣೆಯನ್ನು ಉಪ-ಲೋಕಾಯುಕ್ತ ಕರ್ನಾಟಕ ಇವರಿಗೆ ವಹಿಸುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕುಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ:28:ಕೈಸೇವಿ:6:ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2006**

ಸರ್ಕಾರವು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸೈಯದ್ ರಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಹಿಂದೆ ತಾಲ್ಲೂಕು ಕೈಗಾರಿಕಾ ಕೇಂದ್ರ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯ ಲೋಪ ಎಸಗಿರುವುದು ಕಂಡು ಬಂದಿರುವುದರಿಂದ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957, ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು ಈ ಪ್ರಕರಣವನ್ನು ಇದೇ ನಿಯಮಾವಳಿಗಳ ನಿಯಮ 14-ಎ ರನ್ವಯ ಮಾನ್ಯ ಉಪ-ಲೋಕಾಯುಕ್ತ, ಕರ್ನಾಟಕ ಬೆಂಗಳೂರು ಇವರಿಗೆ ಈ ಮೂಲಕ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 421

ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ (ಸೇವೆಗಳು)

## ಶಿಕ್ಷಣ ಸಚಿವಾಲಯ

**ತಿದ್ದೋಲೆ ಸಂಖ್ಯೆ: ಇಡಿ 312 ಯೋಯೋಕಾ 2005, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2006**

ಸರ್ಕಾರಿ ಆದೇಶ ಸಂಖ್ಯೆ:ಇಡಿ 312 ಯೋಯೋಕಾ 2005 ದಿನಾಂಕ:22.11.2005 (ಇಡಿ 70 ಸ್ಕೀಮರ (ಯೂನಿಕ್) 2005, ದಿನಾಂಕ: 22.11.2005)ರ ಆದೇಶದಲ್ಲಿ ಹೊಸದಾಗಿ ಸೃಜಿಸಲಾಗಿರುವುದರಿಂದ ವಲಯಗಳ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮತ್ತು ಮ್ಯಾನೇಜರ್‌ಗಳ ಹುದ್ದೆಗಳನ್ನು ಅನುಬಂಧ-2ರಲ್ಲಿ ನಮೂದಿಸಿರುವ ಜಿಲ್ಲೆಗಳಲ್ಲಿ ಮುಂದುವರೆಸಿ ಅವರುಗಳಿಗೆ ವೇತನ ವೆಚ್ಚ ಭರಿಸಲು ಸದರಿ ಲೆಕ್ಕ ಶೀರ್ಷಿಕೆಯಲ್ಲಿಯೇ ರೂ.30.29 ಲಕ್ಷಗಳನ್ನು ತಾಲ್ಲೂಕ್ ಪಂಚಾಯತ್ ಕಾರ್ಯಕ್ರಮಗಳಿಗೆ ವರ್ಗಾಯಿಸಿ ಜಿಲ್ಲಾವಲಯದಡಿ ಅನುದಾನವನ್ನು ಬಿಡುಗಡೆ ಮಾಡಿ ಆದೇಶವನ್ನು ಹೊರಡಿಸಲಾಗಿದೆ. ಸದರಿ ಲೆಕ್ಕ ಶೀರ್ಷಿಕೆಯು ಲಿಂಕ್ ಡಾಕ್ಯುಮೆಂಟ್‌ನಿಂದ ಹೊರತುಪಡಿಸಿದೆ. ಎಂಬುದಕ್ಕೆ ಬದಲಾಗಿ ಸದರಿ ಲೆಕ್ಕ ಶೀರ್ಷಿಕೆಯು ಲಿಂಕ್ ಡಾಕ್ಯುಮೆಂಟ್‌ನಿಂದಲೇ ಮುಂದುವರೆಯುತ್ತದೆ. ಎಂದು ತಿದ್ದಿ ಓದಿಕೊಳ್ಳತಕ್ಕದ್ದು. ಉಳಿದಂತೆ ಯಾವ ಬದಲಾಣೆಯು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 425

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಬಿ.ಹೆಚ್.ಶಿವಪ್ಪ,ಹಿಂದಿನ ರಾಜಸ್ವ ನಿರೀಕ್ಷಕ,ಹೊಸಕೋಟೆ ತಾಲ್ಲೂಕು ಹಾಲಿ ತಹಶೀಲ್ದಾರ್,ಮುಂಡರಗಿ ತಾಲ್ಲೂಕು ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**

1 ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ದಿನಾಂಕ:31-10-2002ರ ಪತ್ರ ಸಂಖ್ಯೆ:ಇಎಸ್‌ಟಿ(2) ಸಿಆರ್ 13/01-02

2 ದಿನಾಂಕ:29-01-04ರ ಕಾರಣ ಕೇಳುವ ನೋಟೀಸು ಸಂಖ್ಯೆ:ಆರ್‌ಡಿ:24:ಎಡಿಇ: 2002

3 ಆಪಾದಿತ ನೌಕರರ

ಲಿಖಿತ ಉತ್ತರ: 1) ಶ್ರೀ ಬಿ.ಹೆಚ್.ಶಿವಪ್ಪ-ದಿನಾಂಕ:21-02-2004,12-3-2004
2) ಶ್ರೀ ಕಾಳಭೈರಯ್ಯ-ದಿನಾಂಕ:03-03-04,08-04-04,28-05-04 ಮತ್ತು 28-09-05

4 ದಿನಾಂಕ:22-08-05ರ ಸರ್ಕಾರಿ ಪತ್ರ ಸಂಖ್ಯೆ:ಆರ್‌ಡಿ 24 ಎಡಿಇ 2002.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕು,ಅನುಗೊಂಡನಹಳ್ಳಿ ಹೋಬಳಿ,ತಿರುಮಲಶೆಟ್ಟಿ ಗ್ರಾಮದ ಸ.ನಂ 46 ಮತ್ತು 47ರ ತೋಟಿ ಇನಾಂತಿ ಜಮೀನು ಮರು ಮಂಜೂರಾತಿ ಬಗ್ಗೆ ಕರ್ತವ್ಯಲೋಪ ಎಸಗಿದ ಕಾರಣಕ್ಕಾಗಿ ಈ ಕೆಳಕಂಡ ಅಧಿಕಾರಿ ಹಾಗೂ ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ 1 ರಲ್ಲಿ ಓದಲಾದ ದಿನಾಂಕ: 31.10.02ರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

**ಶ್ರೀಯುತರು**

1.ಬಿ.ಹೆಚ್.ಶಿವಪ್ಪ,ಹಿಂದಿನ ರಾಜಸ್ವ ನಿರೀಕ್ಷಕ, ಅನುಗೊಂಡನಹಳ್ಳಿ,ಹೊಸಕೋಟೆ ತಾಲ್ಲೂಕು, ಹಾಲಿ ತಹಶೀಲ್ದಾರ್,ಮುಂಡರಗಿ ತಾಲ್ಲೂಕು.

2.ಕಾಳಭೈರಯ್ಯ,ಹಿಂದಿನ ದ್ವಿ.ದ.ಸ.ಹಾಲಿ ನಿವೃತ್ತರು

3.ಎಸ್.ನರಸಿಂಹಾಚಾರಿ,ದ್ವಿ.ದ.ಸ. ಹಾಲಿ ನಿವೃತ್ತರು

4.ಬಿ.ತಿಮ್ಮಯ್ಯ,ದಫ್ತರ್‌ಬಂದ್,ಹಾಲಿ ನಿವೃತ್ತರು

ಸದರಿ ಅಧಿಕಾರಿ/ನೌಕರರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1-4ರವರೆಗೆ)ಮೇಲೆ ಕ್ರ.ಸಂ(2)ರಲ್ಲಿ ಓದಲಾದ ದಿನಾಂಕ:29-01-04ರ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರುಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀಬಿ.ಹೆಚ್.ಶಿವಪ್ಪ ತಹಶೀಲ್ದಾರರು ತಮ್ಮ ಲಿಖಿತ ಉತ್ತರವನ್ನು ಸಲ್ಲಿಸಲು 20 ದಿನಗಳ ಕಾಲಾವಕಾಶ ನೀಡುವಂತೆ ತಮ್ಮ ದಿನಾಂಕ:21-02-2004ರ ಮನವಿಯಲ್ಲಿ ಕೋರಿರುತ್ತಾರೆ. ಅದೇ ರೀತಿ ಶ್ರೀ ಕಾಳಭೈರಯ್ಯ,ನಿವೃತ್ತ ಪ್ರಥಮ ದರ್ಜೆ ಸಹಾಯಕರೂ ಸಹ ತಮ್ಮ ದಿನಾಂಕ:03-03-2004ರ ಮನವಿಯಲ್ಲಿ ಲಿಖಿತ ಉತ್ತರ ಸಲ್ಲಿಸಲು ಎರಡು ತಿಂಗಳ ಕಾಲಾವಕಾಶವನ್ನು ನೀಡುವಂತೆ ಕೋರಿರುತ್ತಾರೆ. ಪುನ: ತಮ್ಮ ದಿ:08-04-2004ರ ಮನವಿಯಲ್ಲಿ ತಮ್ಮ ಲಿಖಿತ ಹೇಳಿಕೆ ಸಲ್ಲಿಸಲು ಕೆಲವು ದಾಖಲಾತಿಗಳ ಪ್ರತಿಗಳನ್ನು ಒದಗಿಸುವಂತೆ ಕೋರಿರುತ್ತಾರೆ. ಮತ್ತೊಮ್ಮೆ ದಿನಾಂಕ:28.05.2004ರ ಮನವಿಯಲ್ಲಿ ನಿವೃತ್ತಿ ಹೊಂದಿದ 12 ವರ್ಷಗಳ ನಂತರ ಶಿಸ್ತುಕ್ರಮ ಜರುಗಿಸಬಾರದೆಂದು ಇದರಿಂದಾಗಿ ಮುಂದಿನ ನಡವಳಿಗಳನ್ನು ಕೈಬಿಡುವಂತೆ ಕೋರಿರುತ್ತಾರೆ.

ಶ್ರೀಯುತರಾದ ಬಿ.ಹೆಚ್.ಶಿವಪ್ಪ ಹಾಗೂ ಕಾಳಭೈರಯ್ಯ ಇವರುಗಳು ಅಪೇಕ್ಷಿಸಿದ್ದ ದಾಖಲಾತಿಗಳು ಹೊಸ ಕೋಟೆ ತಾಲ್ಲೂಕು ಕಛೇರಿಯಲ್ಲಿ ಲಭ್ಯವಿದ್ದಲ್ಲಿ ಅವುಗಳನ್ನು ಒದಗಿಸುವಂತೆ ಅಥವಾ ಅವುಗಳನ್ನು ಒದಗಿಸಲು ಸಾಧ್ಯವಿಲ್ಲದಿದ್ದಲ್ಲಿ ಅವುಗಳನ್ನು ಪರಿಶೀಲಿಸಲು ಅವರಿಬ್ಬರಿಗೂ ಅವಕಾಶ ನೀಡುವಂತೆ ಮೇಲೆ ಕ್ರ.ಸಂ(4)ರ ದಿನಾಂಕ:22-8-2005ರ ಪತ್ರದಲ್ಲಿ ಹೊಸಕೋಟೆ ತಾಲ್ಲೂಕು ತಹಶೀಲ್ದಾರರಿಗೆ ಸೂಚಿಸಿ,ಅದರ ಪ್ರತಿಗಳನ್ನು ಶ್ರೀ ಶಿವಪ್ಪ ಹಾಗೂ ಶ್ರೀ ಕಾಳಭೈರಯ್ಯ ಇವರುಗಳಿಗೆ ಕಳುಹಿಸಿ, ಸದರಿ ಪತ್ರ ತಲುಪಿದ 15 ದಿನಗಳೊಳಗಾಗಿ ಮೇಲೆ ಕ್ರ.ಸಂ(2)ರಲ್ಲಿ ಓದಲಾದ ದಿನಾಂಕ:29-01-2004ರ ಕಾರಣ ಕೇಳುವ ನೋಟೀಸಿಗೆ ಉತ್ತರ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಆದರೆ ನಿಗದಿತ ಅವಧಿ ಮೀರಿದ ನಂತರವೂ ಸಹ ದಿನಾಂಕ:29-01-04ರ ಕಾರಣ ಕೇಳುವ ನೋಟೀಸಿಗೆ ಮೇಲೆ ನಮೂದಿಸಿರುವ ನಾಲ್ಕೂ ಮಂದಿ ಆಪಾದಿತರೆಂದು ಹೇಳಲಾಗಿರುವವರಿಂದ ಸರ್ಕಾರಕ್ಕೆ ಲಿಖಿತ ಉತ್ತರ ಬಂದಿರುವುದಿಲ್ಲ. ಆದುದರಿಂದ, ಸದರಿ ಕಾರಣ ಕೇಳುವ ನೋಟೀಸು ಹಾಗೂ ದಿ:22-08-2005ರ ಸರ್ಕಾರಿ ಪತ್ರದಲ್ಲಿ ಸ್ಪಷ್ಟವಾಗಿ ನಮೂದಿಸಿರುವಂತೆ ಇವರುಗಳ ಲಿಖಿತ ಹೇಳಿಕೆ ಏನೂ ಇರುವುದಿಲ್ಲವೆಂದು ನಿರ್ಧರಿಸಿ, ಇವರುಗಳ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ನಿರ್ಧರಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ24ಎಡಿಇ 2002, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣಾ ಜರುಗಿಸಲು ಶ್ರೀ ಎನ್.ಸಿ.ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,ನಂ.643,10ನೇ ಮುಖ್ಯ ರಸ್ತೆ,6ನೇ ಬ್ಲಾಕ್,ರಾಜಾಜಿನಗರ, ಬೆಂಗಳೂರು-10 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

**ಶ್ರೀಯುತರು**

1) ಬಿ.ಹೆಚ್.ಶಿವಪ್ಪ,ಹಿಂದಿನ ರಾಜಸ್ವ ನಿರೀಕ್ಷಕರು,
ಅನುಗೊಂಡನಹಳ್ಳಿ ಹೋಬಳಿ,ಹೊಸಕೋಟೆ ತಾಲ್ಲೂಕು
ಹಾಲಿ ತಹಶೀಲ್ದಾರ್,ಮುಂಡರಗಿ ತಾಲ್ಲೂಕ್,ಗದಗ್ ಜಿಲ್ಲೆ.
2) ಶ್ರೀ ಕಾಳಭೈರಯ್ಯ,ಹಿಂದಿನ ದ್ವಿತೀಯ ದರ್ಜೆ ಸಹಾಯಕರು.ತಾಲ್ಲೂಕು ಕಛೇರಿ,
ಹೊಸಕೋಟೆ ತಾಲ್ಲೂಕು,ಹಾಲಿ ನಿವೃತ್ತಿ,ನಂ.447,(ಹೊಸ ನಂ.3040)ಸುಧಾಮನಗರ
ನೆಲಮಂಗಲ ಟೌನ್,ಬೆಂಗಳೂರು ಗ್ರಾಮಾಂತರ ಜಿಲ್ಲೆ,
3) ಶ್ರೀ ಎಸ್.ನರಸಿಂಹಾಚಾರಿ, ಹಿಂದಿನ ದ್ವಿತೀಯ ದರ್ಜೆ ಸಹಾಯಕರು.ತಾಲ್ಲೂಕು ಕಛೇರಿ,
ಹೊಸಕೋಟೆ ತಾಲ್ಲೂಕು,ಹಾಲಿ ದ್ವಿತೀಯ ದರ್ಜೆ ಸಹಾಯಕರು(ನಿವೃತ್ತಿ)ತಾಲ್ಲೂಕು ಕಛೇರಿ,
ದೇವನಹಳ್ಳಿ ತಾಲ್ಲೂಕು
4) ಶ್ರೀ ಬಿ.ತಿಮ್ಮಯ್ಯ,ಹಿಂದಿನ ದಫ್ತರ್‌ಬಂದ್,ಹೊಸಕೋಟೆ ತಾಲ್ಲೂಕು,
ಹಾಲಿ ನಿವೃತ್ತರು,ಮಾರುತಿ ನಗರ,ದೊಡ್ಡ ಬಳ್ಳಾಪುರ ಟೌನ್,ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಧಿ ಪಡಿಸಿದ ಸ್ಥಳದಲ್ಲಿ ವಿಚಾರಣೆ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ2 ವಿಚಾರಣಾಧಿಕಾರಿಗಳಿಗೆ ರೂ.5000/-(ಐದು ಸಾವಿರ ರೂಪಾಯಿ ಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ(ಸಿ.ಸಿ.ಎ)ನಿಯಮಗಳು 1957ರ ನಿಯಮ 11 ಮತ್ತು 11-ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 371

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಸೇವೆಗಳು-3).

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆ ಬಿಜಾಪುರ ಕಂದಾಯ ತಾಲ್ಲೂಕು ಇಲ್ಲಿಗೆ ಹೆಚ್ಚುವರಿ ನೋಟರಿ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ.ಲಾ 210 ಎಲ್‌ಸಿಎಲ್ 05 ದಿನಾಂಕ: 24.8.2005.
2. ಸರ್ಕಾರಿ ಸಮಸಂಖ್ಯೆ ಪತ್ರ ಸಂಖ್ಯೆ:ಲಾ 210 ಎಲ್‌ಸಿಎಲ್ 05, ದಿನಾಂಕ:10.11.05.
3. ಪತ್ರ ಸಂ:ಸಿ.ಪಿ.ಎನ್:6798/2005, ದಿನಾಂಕ:1.12.2005.
4. ಸರ್ಕಾರದ ಆದೇಶ ಸಂಖ್ಯೆ:ಲಾ 210 ಎಲ್‌ಸಿಎಲ್ 05, ದಿನಾಂಕ:5.1.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಿಜಾಪುರ ಕಂದಾಯ ತಾಲ್ಲೂಕಿಗೆ ಎರಡು ನೋಟರಿ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿತ್ತು.

ಸದರಿ ಹುದ್ದೆಗಳಿಗೆ ಸೂಕ್ತ ವಕೀಲರನ್ನು ನೇಮಕಾತಿ ಮಾಡುವ ಸಲುವಾಗಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾನೆಯನ್ನು ಪರಿಶೀಲಿಸಿ, ಮೇಲೆ ಓದಲಾದ (4) ದಿನಾಂಕ:5.1.2006ರ ಆದೇಶದಲ್ಲಿ 2 ನೋಟರಿ ಹುದ್ದೆಗಳ ಪೈಕಿ ಶ್ರೀ ಚಂದ್ರಶೇಖರ ವೆಂಕಪ್ಪ ಬದರಿ, ಇವರನ್ನು ಒಂದು ಹುದ್ದೆಗೆ ನೋಟರಿಯಾಗಿ ನೇಮಿಸಿ, ಆದೇಶ ಹೊರಡಿಸಿದೆ. ಉಳಿದ ಇನ್ನೊಂದು ಖಾಲಿ ಇರುವ ನೋಟರಿ ಹುದ್ದೆಗೆ ಈಗ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ.ಲಾ 210 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2006**

ನೋಟರಿ ನಿಯಮಗಳ (1956) ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಶ್ರೀ. ಲಿಂಬಣ್ಣ ಪರಶುರಾಮ ಲಮಾಣಿ, ವಕೀಲರು, ವಜ್ರ ಹನುಮಾನ್‌ನಗರ, ಬಾಗಲಕೋಟೆ ರಸ್ತೆ, ಬಿಜಾಪುರ, ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ 5 ವರ್ಷಗಳ ಅವಧಿಗೆ ಬಿಜಾಪುರ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ರೂ. 1000/-ಗಳ ಮೊತ್ತದ ಶುಲ್ಕವನ್ನು ಲೆಕ್ಕ ಶೀರ್ಷಕೆ "0070ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ 501- 0 -ಇತರೆಸ್ವೀಕೃತಿಗಳು- 06 ಇತರೆ ಬಾಬುಗಳು" (0070- 01-501-0-06) ಗೆ ಪಾವತಿಸಿರುವ ಮೂಲ ಚಲನ್ ಸಲ್ಲಿಸುವುದರ ಜೊತೆಗೆ ಅವರ ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲಾತಿ ಹಾಜರುಪಡಿಸಿದ ನಂತರ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952) ದ 4ನೇ ಪ್ರಕರಣದ ಪ್ರಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎ.ಬಾಬು ರವೀಂದ್ರನಾಥ್ ಪಟೇಲ್**

ಪಿ.ಆರ್. 426

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ:** ಶ್ರೀ ಜಿ.ಎಂ. ಗಂಗಾಧರಯ್ಯ, ಉದ್ಯೋಗಾಧಿಕಾರಿ (ನಿವೃತ್ತಿ) ಇವರ ವಿರುದ್ದದ ಇಲಾಖಾ ವಿಚಾರಣೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಅವರ ಪತ್ರ ಸಂಖ್ಯೆ ಉತನಿ/ಉದ್ಯೋಗ/ಶಿಪ್ರವಿ-9/ವಿವ-33/ 2002-03 ದಿ:18.8.2005.
2. ವಿಚಾರಣಾಧಿಕಾರಿಗಳು ದಿ:13.4.2005 ರಂದು ಸಲ್ಲಿಸಿರುವ ವಿಚಾರಣಾ ವರದಿ.
3. ಶ್ರೀ ಜಿ.ಎಂ. ಗಂಗಾಧರಯ್ಯ, ನಿವೃತ್ತ ಉದ್ಯೋಗಾಧಿಕಾರಿ, ಇವರಿಗೆ ದಿ:9.5.2005 ರಂದು 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದೆ.
4. ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಿ ಬರೆದ ಪತ್ರ ದಿ:16.1.2006.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ನಿರ್ದೇಶಕರು ಶ್ರೀ ಜಿ.ಎಂ. ಗಂಗಾಧರಯ್ಯ, ನಿವೃತ್ತ ಉದ್ಯೋಗಾಧಿಕಾರಿ, ಇವರು ಹಿಂದೆ ಹಾಸನದ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರದಲ್ಲಿ ಉದ್ಯೋಗಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕೈಗೊಂಡ ಅಭ್ಯರ್ಥಿಗಳ ನೊಂದಣಿ ಹಾಗೂ ಪುರಸ್ಕರಣಾ ಕಾರ್ಯದಲ್ಲಿನ ಕಾರ್ಯದಲ್ಲಿನ ಲೋಪದೋಷಗಳು ಹಾಗೂ ಇಲಾಖಾ ಹಿರಿಯ ಅಧಿಕಾರಿಗಳ ವಿರುದ್ಧ ಆಧಾರ ರಹಿತ ಆಪಾದನೆ

ಮಾಡಿದ ಎರಡು ನಿರ್ದಿಷ್ಟ ಆರೋಪಗಳ ಕುರಿತಂತೆ ದೋಷಾರೋಪಣೆ ಪಟ್ಟಿ ಜಾರಿ ಮಾಡಿದ್ದು ಸದರಿಯವರು ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದ ಹಿನ್ನೆಲೆಯಲ್ಲಿ, ಪ್ರಕರಣದ ಸತ್ಯಾಸತ್ಯತೆ ತಿಳಿಯಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11 (2) ಮತ್ತು 11 (5) ರ ಮೇರೆಗೆ ಇಲಾಖಾ ವಿಚಾರಣೆ ಕೈಗೊಳ್ಳಲು ಶ್ರೀ ಎಂ. ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ (2) ರ ದಿ:13.4.2005 ರಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ 2 ಆರೋಪಗಳ ಪೈಕಿ 1 ರ ಉಪ ಆರೋಪ 2 ಮತ್ತು 4 ಸಾಬೀತಾಗಿರುವುದಾಗಿ ವರದಿ ಮಾಡಿದ್ದಾರೆ.

ಮೇಲೆ ಓದಲಾದ (3)ರಲ್ಲಿ ಶ್ರೀ ಜಿ.ಎಂ. ಗಂಗಾಧರಯ್ಯ, ನಿವೃತ್ತ ಉದ್ಯೋಗಾಧಿಕಾರಿ ಇವರಿಗೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿಮಾಡಲಾಗಿದೆ. ಅವರು ಅದಕ್ಕೆ ದಿನಾಂಕ: 10.6.2005ರಂದು ಹೇಳಿಕೆ ನೀಡಿದ್ದು, ಆರೋಪದಿಂದ ಮುಕ್ತಗೊಳಿಸಲು ಕೋರಿರುತ್ತಾರೆ. ವಸ್ತುಸ್ಥಿತಿ ಪರಿಶೀಲಿಸಲಾಗಿ ಅವರ ಕೋರಿಕೆ ಸಮಂಜಸವಾಗಿರುವುದಿಲ್ಲ. ಆದ್ದರಿಂದ ಅವರ ಬೇಜವಾಬ್ದಾರಿ ವರ್ತನೆಗೆ, ಅವರ ವಿಶ್ರಾಂತಿ ವೇತನದಲ್ಲಿ ಪ್ರತಿ ತಿಂಗಳು 100 ರೂಪಾಯಿಗಳಂತೆ ಎರಡು ವರ್ಷದವರೆಗೆ ವಸೂಲಿ ಮಾಡುವ ದಂಡನೆ ವಿಧಿಸಲು ಸರ್ಕಾರ ತೀರ್ಮಾನಿಸಿರುತ್ತದೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 92 ಇಟಿಎಕ್ಸ್ 2005, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಜಿ.ಎಂ. ಗಂಗಾಧರಯ್ಯ, ಉದ್ಯೋಗಾಧಿಕಾರಿ (ನಿವೃತ್ತ) ಇವರು ಹಿಂದೆ ಹಾಸನದ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರದಲ್ಲಿ ಉದ್ಯೋಗಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಅಭ್ಯರ್ಥಿಗಳ ನೋಂದಣಿ ಹಾಗೂ ಪುರಸ್ಕರಣಾ ಕಾರ್ಯದಲ್ಲಿನ ಲೋಪದೋಷಗಳು ಹಾಗೂ ಇಲಾಖಾ ಹಿರಿಯ ಅಧಿಕಾರಿಗಳ ವಿರುದ್ಧ ಆಧಾರರಹಿತ ಆಪಾದನೆ ಮಾಡಿದ ಬಗ್ಗೆ, ಬೇಜವಾಬ್ದಾರಿ ವರ್ತನೆಗೆ ಅವರ ವಿಶ್ರಾಂತಿ ವೇತನದಲ್ಲಿ ಪ್ರತಿ ತಿಂಗಳು 100 (ಒಂದು ನೂರು ರೂಪಾಯಿ ಮಾತ್ರ) ರೂಪಾಯಿಗಳಂತೆ ಎರಡು ವರ್ಷದವರೆಗೆ ವಸೂಲಿ ಮಾಡುವ ದಂಡನೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(1)(ಎ) ರನ್ವಯ ವಿಧಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿ.ಎಸ್.ಸಿ. 179 ಸಿ.ಎನ್.ಎಸ್. 05 ದಿನಾಂಕ: 22.2.2006ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 427

**ಎಂ.ಟಿ. ಶ್ರೀನಿವಾಸನ್**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

## ಆರ್ಥಿಕ ಸಚಿವಾಲಯ

**ವಿಷಯ:** ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಮೈಸೂರು, ಇಲ್ಲಿ ಪ್ರತಿನಿಯೋಜನೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ವರ್ಗದವರಿಗೆ ವಿಶೇಷ ಭತ್ಯೆಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 13 ಎಸ್‌ಆರ್‌ಪಿ 2000 (1) ದಿನಾಂಕ:9.6.2005.
2. ಮಹಾನಿರ್ದೇಶಕರು, ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಮೈಸೂರು ಇವರ ಪತ್ರದ ಸಂಖ್ಯೆ:ರಾಗ್ರಾಪಂ/ಸಿಬ್ಬಂದಿ-4/98-99 ದಿನಾಂಕ: 4.11.2004 ಮತ್ತು 12.7.2005.

**ಪ್ರಸ್ತಾವನೆ:**

2005ರ ಅಧಿಕಾರಿ ಸಮಿತಿಯ ಶಿಫಾರಸ್ಸುಗಳನ್ವಯ, ಮೇಲೆ (1)ರಲ್ಲಿ ಓದಲಾದ ದಿನಾಂಕ:9.6.2005ರ ಸರ್ಕಾರಿ ಆದೇಶದಲ್ಲಿ ವಿಶೇಷ ಭತ್ಯೆಗೆ ಸಂಬಂಧಿಸಿದಂತೆ, ಸರ್ಕಾರದ ಹಲವಾರು ಇಲಾಖೆಗಳಿಂದ ಹೊರಡಿಸಲಾಗಿರುವ ಹಿಂದಿನ ಎಲ್ಲಾ ಆದೇಶಗಳನ್ನು ರದ್ದುಗೊಳಿಸಿ, ಸದರಿ ಆದೇಶದ ಅನುಬಂಧದಲ್ಲಿ ಸೂಚಿಸಲಾಗಿರುವ ವಿವಿಧ ವರ್ಗದ ಹುದ್ದೆಗಳಿಗೆ ವಿಶೇಷ ಭತ್ಯೆಯು ಸದರಿ ಹುದ್ದೆಗಳ ಎದುರು ಸೂಚಿಸಿರುವ ದರಗಳಲ್ಲಿ ಮತ್ತು ಷರತ್ತುಗಳಿಗನುಸಾರವಾಗಿ ದಿನಾಂಕ:1.6.2005ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಲಭ್ಯವಾಗತಕ್ಕದ್ದು ಎಂದು ಆದೇಶಿಸಲಾಗಿದೆ. ಈ ಆದೇಶದ ಅನುಬಂಧದ ಕ್ರಮ ಸಂಖ್ಯೆ 9ರಲ್ಲಿ ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಜಿಲ್ಲಾ ತರಬೇತಿ ಸಂಸ್ಥೆಗಳು ಮತ್ತು ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ, ಬೆಂಗಳೂರು, ಇಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಬೋಧಕ ವರ್ಗದ ಸಿಬ್ಬಂದಿಯವರಿಗೆ ಮಾಸಿಕ ರೂ.750/-ಗಳ ಮಿತಿಗೆ ಒಳಪಟ್ಟು 1999ರ ವೇತನ ಶ್ರೇಣಿಗಳ ಕನಿಷ್ಠ ಮತ್ತು ಗರಿಷ್ಠ ವೇತನದ ಮಧ್ಯದ ವೇತನದ ಶೇಕಡ 10 ರಷ್ಟು ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿರುತ್ತದೆ. ಆದರೆ ಈ ಆದೇಶದಲ್ಲಿ ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಲ್ಲಿನ ಬೋಧಕ ವರ್ಗದವರಿಗೆ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿರುವುದಿಲ್ಲ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 12.11.004 ಮತ್ತು 12.7.2005ರ ಪತ್ರಗಳಲ್ಲಿ, ಮಹಾನಿರ್ದೇಶಕರು, ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಮೈಸೂರು, ಇವರು ಆಡಳಿತ ತರಬೇತಿ ಸಂಸ್ಥೆ ಮತ್ತು ಜಿಲ್ಲಾ ತರಬೇತಿ ಸಂಸ್ಥೆಗಳಲ್ಲಿನ ಬೋಧಕ ವರ್ಗದ ಹುದ್ದೆಗಳಿಗೆ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 28 ಇಆತ 99, ದಿನಾಂಕ:7.9.1999ರ ಆದೇಶದಲ್ಲಿ ಮಾಸಿಕ ರೂ.400/- ಗಳಿಗೆ ಮೀರದಂತೆ ಮೂಲ ವೇತನದ ಶೇ.10 ರಷ್ಟು ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದೆಯೆಂದು ತಿಳಿಸುತ್ತಾ, ಆಡಳಿತ ತರಬೇತಿ ಸಂಸ್ಥೆಯಂತೆಯೇ ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಯೂ ಸಹ ರಾಜ್ಯ ಮಟ್ಟದ ತರಬೇತಿ ಸಂಸ್ಥೆಯಾಗಿದ್ದು, ಪಂಚಾಯತ್ ರಾಜ್ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳಿಗೆ/ ಅಧಿಕಾರಿಗಳಿಗೆ ಹಾಗೂ ಇತರೆ ಅಭಿವೃದ್ಧಿ ಇಲಾಖೆಗಳ ಅಧಿಕಾರಿಗಳಿಗೆ ಮತ್ತು ಅಭಿವೃದ್ಧಿಪರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳಿಗೆ ತರಬೇತಿ ನೀಡುವ ಮಹತ್ವದ ಜವಾಬ್ದಾರಿಯನ್ನು ಹೊಂದಿರುತ್ತದೆ ಎಂದೂ ಹಾಗೂ ಸದರಿ ಸಂಸ್ಥೆಯ ಆವರ್ತಕ ವೆಚ್ಚ ನಿರ್ವಹಣೆಗಾಗಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳೆರಡೂ ಶೇ.50 ರ ಅನುಪಾತದಲ್ಲಿ ಅನುದಾನ ನೀಡುತ್ತಿರುವುದರಿಂದ, ಸದರಿ ಸಂಸ್ಥೆಯ ಬೋಧಕ ವರ್ಗದವರಿಗೂ ಸಹ ಆಡಳಿತ ತರಬೇತಿ ಸಂಸೆಯ ಬೋಧಕ ವರ್ಗದವರಿಗೆ ನೀಡಲಾಗುತ್ತಿರುವಂತೆ ವಿಶೇಷ ಭತ್ಯೆಯನ್ನು ಮಂಜೂರು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2000(1), ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಮೈಸೂರು, ಇಲ್ಲಿ ಪ್ರತಿನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಬೋಧಕ ವರ್ಗದವರಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2000(1)

ದಿನಾಂಕ:9.6.2005ರ ಆದೇಶದ ಅನುಬಂಧದಲ್ಲಿನ ಕ್ರಮ ಸಂಖ್ಯೆ:9 ರಲ್ಲಿ ಸೂಚಿಸಲಾಗಿರುವ ದರದಲ್ಲಿ ವಿಶೇಷ ಭತ್ಯೆಯನ್ನು ಆ ಆದೇಶದಲ್ಲಿನ ಷರತ್ತುಗಳಿಗೆ ಒಳಪಟ್ಟು ಪಟ್ಟು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಪಿ.ಆರ್. 365

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ, (ಸೇವೆಗಳು-2)

## ಸಾರಿಗೆ ಸಚಿವಾಲಯ

### ತಿದ್ದೋಲೆ ಸಂ:ಸಾರಿಇ 15 ಸಾಇಪ 2006, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2006

ಸರ್ಕಾರಿ ಅಧಿಸೂಚನೆ ಸಂಖ್ಯೆ:ಸಾರಿಇ 15 ಸಾಇಪ 2006, ದಿನಾಂಕ:20.3.2006ರನ್ವಯ ಶ್ರೀಮತಿ ಕೊಟ್ರವ್ವ ಸೋಮಪ್ಪ ಮುದಗಲ್, 1ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಇವರನ್ನು ಕರ್ನಾಟಕ ಸ್ಟೇಟ್ ಟ್ರಾನ್ಸ್‌ಪೋರ್ಟ್ ಅಪೆಲೇಟ್ ಟ್ರಿಬ್ಯೂನಲ್ ಬೆಂಗಳೂರು ಇಲ್ಲಿಗೆ "ಮಂಡನಾಧಿಕಾರಿ" ಎಂಬುದಾಗಿ ನೇಮಕ ಮಾಡಿರುವುದಕ್ಕೆ ಬದಲಾಗಿ "ಪ್ರಿಸೈಡಿಂಗ್ ಅಧಿಕಾರಿ" ಎಂಬುದಾಗಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 428

**ಶಿವರಾಮಶೆಟ್ಟಿ**

ಪೀಠಾಧಿಕಾರಿ, ಸಾರಿಗೆ ಇಲಾಖೆ.

## COMMERCE AND INDUSTRIES SECRETARIAT

**Sub:** Tansfer of Mining lease N.2037 held by Smt G.P. Indumati in favour of M/s Alok Kumar & Co.,

**Read:** Letter No.DMG/04/TRN/99/1733 dated 14.9.2001 of the Director of Mines and Geology, Bangalore.

**Preamble:-**

The Director of Mines and Geology, Bangalore in his letter read above has stated that Smt G.P. Indumati is holding Mining Lease No.2037 for Manganese ore, Limestone and Dolomite, over an area of 35.20 Hectares in part of Sy.No. 99 of Chikkabyaladakere village, Hosadurga taluk, Chitradurga district for a period of 20 years w.e.f. 18.4.1987. The lessee has requested to transfered of Mining Lease No. 2037 in favour of M/s Alok Kumar & Co., for development of Mineas and Mineral Marketing in a proper manner and as required by law. M/s Alok Kumar & Co., have also agreed to take over the Mining lease on transfer as per Rule 37 of MC Rules, 1960 subject to terms and conditions of mining lease. Since both the applicants have fulfilled all the requirements as per MC Rules, 1960, the Director of Mines and Geology has recommended to the Government for transfer of Mining Lease No.2037 held by Smt.G.P. Indumati in favour of M/s Alok Kumar & Co., as per rule 37 of M.C. Rules, 1960.

The proposal has been examined.

### Government Order No. CI.113:MMM.2005, Bangalore, Dated: 13th March 2006

In the circumstances explained in the preamble the Gvernment are pleased to accord sanction (under Rule 37 of M.C. Rules, 1960) for transfer of Mining Lease No.2037 held by Smt G.P. Indumati in Chikkabyaladakere village, Hosadurga taluk, Chitradrga district over an area of 35.20 hectares in favour of M/s Alok Kumar and Company for the unexpired period of the lease i.e., up to 18.4.2007 under Rule 37(1)(a) of MCR, 1960, subject to the condition that the transferee shall accept all he conditions and liabilities which the transferor was having in respect of the said mining lease.

By Order and in the name of the Governor of Karnataka,

**JAGADISH JOIS**

P.R. 429

Under Secretary to Government (Mines),

Commerce and Industries Department.

## ಶಿಕ್ಷಣ ಸಚಿವಾಲಯ

### ಸುತ್ತೋಲೆ ಸಂಖ್ಯೆ: ಇಡಿ 309 ಡಿಪಿಐ 2005, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2006

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್-ಎ ಮತ್ತು ಬಿ ವೃಂದದ ಅಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ-32 ರಡಿ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ ಸೂಚನೆಗಳು.

**ಪ್ರಸ್ತಾವನೆ:**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ-68 ರನ್ವಯ ಮಾಡುವ ಪ್ರಭಾರ ವ್ಯವಸ್ಥೆಗೆ ಸಂಬಂಧಪಟ್ಟಂತೆ ಪ್ರಭಾರದಲ್ಲಿ ನೇಮಿಸುವ ಅಧಿಕಾರಿಗಳಿಗೆ ಪ್ರಭಾರ ಭತ್ಯೆಗೆ ಅಗತ್ಯವಿರುವ ಸೂಕ್ತ ದಾಖಲೆಗಳನ್ನು ಪಡೆದು ವಿಳಂಬಕ್ಕೆ ಅವಕಾಶ ನೀಡದೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ತಿಳಿಸಲಾಗಿದೆ.

ಆದರೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್-ಬಿ ಮತ್ತು ಎ ವೃಂದದ ಅಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32 ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ನೇಮಿಸುವಾಗ ಸದರಿ ಅಧಿಕಾರಿಗಳಿಗೆ ಬಡ್ತಿ ನೀಡುವಾಗ ಇರುವ ಅರ್ಹತೆಗಳನ್ನು ಪರಿಗಣಿಸಿ ಸ್ವತಂತ್ರ

ಪ್ರಭಾರದಲ್ಲಿರಿಸಲಾಗಿದೆ. ಆದ್ದರಿಂದ ಅಂತಹ ಅಧಿಕಾರಿಗಳಿಂದ ಪ್ರಭಾರ ಭತ್ಯೆಗಾಗಿ ಮನವಿಯನ್ನು ನಿರೀಕ್ಷಿಸುವ ಅವಶ್ಯಕತೆ ಇರುವುದಿಲ್ಲ. ಸಂಬಂಧಿಸಿದ ಅಧಿಕಾರಿಗಳು ಸ್ವತಂತ್ರ ಪ್ರಭಾರದಲ್ಲಿರಿಸಿ ಅವಧಿಯಲ್ಲಿ ಪಡೆದ ಗಳಿಕೆ ರಜೆ ಮತ್ತು ಪರಿವರ್ತಿತ ರಜೆ ಬಗ್ಗೆ ಮಾಹಿತಿಯನ್ನು ಸಾಧ್ಯವಾದಲ್ಲಿ ಪಡೆದು ಸದರಿ ರಜೆಯನ್ನು ಹೊರತುಪಡಿಸಿ ಸ್ವತಂತ್ರ ಪ್ರಭಾರದಲ್ಲಿರಿಸಿದನ್ನು ಖಾತರಿಪಡಿಸಿ ಆ ಅವಧಿಗೆ ಪ್ರಭಾರ ಭತ್ಯೆ ಮಂಜೂರಾತಿಗೆ ವಿಳಂಬಕ್ಕೆ ಅವಕಾಶ ನೀಡದೆ ಸಕ್ಷಮ ಪ್ರಾಧಿಕಾರಿಗಳಿಗೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ.ಎಂ.ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇವೆಗಳು-1,2)

ಪಿ.ಆರ್. 430

**ವಿಷಯ:** ಸರ್ಕಾರಿ ಬಾಲಕಿಯರ ಪ್ರೌಢಶಾಲೆ ಮುಳಬಾಗಿಲು, ಕೋಲಾರ ಜಿಲ್ಲೆ ಈ ಶಾಲೆಗೆ ಮಾಸಿಕ ಬಾಡಿಗೆ ಬಗ್ಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** ನಿರ್ದೇಶಕರು (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವರ ಪತ್ರ ಸಂಖ್ಯೆ:ಸಿ4(7).ಸ.ಪ್ರೌ.ಬಾಡಿಗೆನಿಗಧಿ ಆ.81/2005-06 ದಿ:23.2.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿ:23.2.2006ರ ನಿರ್ದೇಶಕರು, (ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಪತ್ರದಲ್ಲಿ ಸರ್ಕಾರಿ ಬಾಲಕಿಯರ ಪ್ರೌಢಶಾಲೆ ಮುಳಬಾಗಿಲು, ಕೋಲಾರ ಜಿಲ್ಲೆ ಈ ಶಾಲೆಯ ನಿರ್ವಹಣೆಗಾಗಿ ಮುಳಬಾಗಿಲಿನ ತಾಲ್ಲೂಕು ಎಪಿಎಂಎಸ್‌ಗೆ ಸೇರಿದ "ರೈತ ಸಮುದಾಯ ಭವನದ" ಕಟ್ಟಡನ್ನು ಶಾಲೆಗೆ ಬಾಡಿಗೆ ಪಡೆದಿದ್ದು, ಈ ಕಟ್ಟಡಕ್ಕೆ ಮಾಸಿಕ ಬಾಡಿಗೆಯಾಗಿ ರೂ.20.500/-ಗಳಿಗೆ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಕೋಲಾರ ಇವರ ಪತ್ರ ಸಂ.ಕಾ.ಪಾ.ಇಂ.ಲೋ.ಇ.ಕಿ.ಇ01.ಪ್ರೌ.ಶಾ.ಯಾ.ಸ.ಸಿ.ಕ.ಶಾ.2005-06 ದಿ:31.5.2005ರಲ್ಲಿ ನಿಗದಿಪಡಿಸಲಾಗಿದೆ ಎಂದು ತಿಳಿಸಿ ಇಲಾಖಾ ಮುಖ್ಯಸ್ಥರಿಗೆ ಕೇವಲ ರೂ.10,000/-ರವರೆಗೆ ಮಾತ್ರ ಅಧಿಕಾರ ಇರುವುದರಿಂದ ಹೆಚ್ಚಿನ ಮಂಜೂರಾತಿಗೆ ಸರ್ಕಾರದ ಅನುಮೋದನೆಯನ್ನು ಕೋರಿ ದಿ:14.6.2004 ರಿಂದ ಮಾಸಿಕವಾಗಿ ರೂ.2,500/- ನಂತೆ ಕಟ್ಟಡದ ಮಾಲೀಕರಿಗೆ ಪಾವತಿಸುವ ಬಗ್ಗೆ ಆಡಳಿತಾತ್ಮಕ ಮಂಜೂರಾತಿಗಾಗಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 126 ಯೋಸಕಾ 2006, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2006**

**[ಇಡಿ:33:ಸ್ವೀಮರ ಯುನಿಕ್) 2006, ದಿನಾಂಕ: 18ನೇ ಮಾರ್ಚ್ 2006]**

ಸರ್ಕಾರಿ ಬಾಲಕಿಯರ ಪ್ರೌಢಶಾಲೆ ಮುಳಬಾಗಿಲು, ಕೋಲಾರ ಜಿಲ್ಲೆ ಈ ಶಾಲೆಯ ನಿರ್ವಹಣೆಗಾಗಿ ಮುಳಬಾಗಿಲಿನ ತಾಲ್ಲೂಕು ಎಪಿಎಂಎಸ್‌ಗೆ ಸೇರಿದ "ರೈತ ಸಮುದಾಯ ಭವನದ" ಕಟ್ಟಡಕ್ಕೆ ದಿ:14.6.2004ರಿಂದ ಜಾರಿಗೆ ಬರುವಂತೆ ಮಾಸಿಕ ಬಾಡಿಗೆಯಾಗಿ ರೂ.20,500/-(ರೂ.ಇಪ್ಪತ್ತು ಸಾವಿರದ ಐದುನೂರುಗಳು ಮಾತ್ರ)ಗಳಿಗೆ ನಿಗದಿಪಡಿಸಿ ಆಡಳಿತಾತ್ಮಕ ಅನುಮೋದನೆಯನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ನೀಡಲಾಗಿದೆ. ಮೇಲ್ಕಂಡ ಮೊತ್ತವನ್ನು ಪ್ರತಿ ವರ್ಷವು ಜಿಲ್ಲಾ ಪಂಚಾಯತ್ ಆಯವ್ಯಯದಲ್ಲಿ ಒದಗಿಸಿಕೊಳ್ಳುವ ಹಾಗೂ ಯಾವುದೇ ಕಾರಣಕ್ಕೂ ಸರ್ಕಾರಕ್ಕೆ ಆಯವ್ಯಯ ಒದಗಿಸಲು ಕೋರಬಾರದೆಂಬ ಷರತ್ತನ್ನು ವಿಧಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ.ಸಂಖ್ಯೆ:ಶಿಇ:178 ಐಎಫ್‌ಎಸ್ 2006 ದಿ:13.3.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ,

ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ

ಪಿ.ಆರ್. 431

## ಇಂಧನ ಸಚಿವಾಲಯ

**ವಿಷಯ:** ಮೆ: ಎಂ.ಎಸ್.ಜಿ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 2.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಗಡ್ಡಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 5.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಇಂಇ 445 ಎನ್‌ಸಿಇ 2004, ದಿನಾಂಕ: 5.1.2005.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ದೇವರಗಡ್ಡಿ/2006/585 ದಿನಾಂಕ: 6/15.3.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ಎಂ.ಎಸ್.ಜಿ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ದೇವರಗಡ್ಡಿ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಗಡ್ಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಮೇಲೆ ಹೇಳಿರುವ ಕಂಪನಿಯ ಅಭಿವೃದ್ಧಿದಾರರು ಯೋಜನಾ ಸ್ಥಳದಲ್ಲಿ ವಿವರವಾದ ಸರ್ವೇಕ್ಷಣೆ ಮಾಡಿ ಸಲ್ಲಿಸಿರುವ ಡಿಪಿಆರ್‌ನಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದನಾ ಸಾಮರ್ಥ್ಯ ಇರುವುದಾಗಿ ತಿಳಿಸಿ ಸದರಿ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 5.0 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎನ್ 134 ಎನ್‌ಸಿಇ 2006, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2006**

ಮೆ: ಎಂ.ಎಸ್.ಜಿ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ದೇವರಗಡ್ಡಿ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಗಡ್ಡಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 5.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಈ ಕೆಳಗಿನ ಷರತ್ತಿಗೆ ಒಳಪಟ್ಟು ಅನುಮತಿ ನೀಡಲಾಗಿದೆ.

1. ಕೆಳತೊರೆಯಲ್ಲಿ ಹಂಚಿಕೆಯಾದ ಮೆ: ಭೂರೂಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯವರ 24.75 ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಗೆ, ಈ ಯೋಜನೆಯ ಅನುಷ್ಠಾನದಿಂದ ಯಾವುದೇ ತೊಂದರೆಯಾಗಕೂಡದು.
2. ಮೇಲ್ತೊರೆಯಲ್ಲಿ ನಾರಾಯಣಪುರ ಜಲಾಶಯವಿರುವುದರಿಂದ, ಇದಕ್ಕೆ ಸಂಬಂಧಿಸಿದಂತೆ ನೀರಾವರಿ ಇಲಾಖೆಯಿಂದ ಇಲಾಖೆಯಿಂದ ಡಿ.ಪಿ.ಆರ್. ರೂಪುರೇಷೆ (ನಕ್ಷೆ)ಗಳಿಗೆ ಅನುಮೋದನೆಯನ್ನು ಪಡೆಯತಕ್ಕದ್ದು.
3. ಸದ್ಯದಲ್ಲಿರುವ ಅಥವಾ ಮುಂಬರುವ ಯಾವುದೇ ಕುಡಿಯುವ/ನೀರಾವರಿ ಯೋಜನೆಗಳಿಂದಾಗಲಿ ಅಥವಾ ಇನ್ನಿತರ ಯಾವುದೇ ಸರ್ಕಾರಿ ಯೋಜನೆಗಳಿಂದಾಗಲಿ, ಈ ಯೋಜನೆಗೆ ಧಕ್ಕೆ ಬಂದಲ್ಲಿ ಅದಕ್ಕೆ ಅಭಿವೃದ್ದಿದಾರರೇ ಸಂಪೂರ್ಣ ಹೊಣೆಗಾರರಾಗಿರುತ್ತಾರೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 433

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕು ಕಲ್ಲೇದೇವರಪುರದ ಬಾಪೂಜಿ ಎಜುಕೇಷನ್ ಸೊಸೈಟಿಯು ಚಿತ್ರದುರ್ಗದಲ್ಲಿ ಪ್ರಾರಂಭಿಸಲಿರುವ ಶ್ರೀ ಹೇಮಾವತಿ ಕುವೆಂಪು ಮಹಿಳಾ ಬಿ.ಎಡ್. ಶಿಕ್ಷಣ ಮಹಾವಿದ್ಯಾಲಯಕ್ಕೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:**
1. ದಿನಾಂಕ:21.2.2004ರ ಸಂ. ಇಡಿ 139 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ:21.12.2005, ಸಂಖ್ಯೆ: F.SRO/NCTE/B.Ed/2005-06/4890ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:9.2.2006ರ ಅಧ್ಯಕ್ಷರು, ಬಾಪೂಜಿ ಎಜುಕೇಷನ್ ಸೊಸೈಟಿ, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳಿಗೆ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕು ಕಲ್ಲೇದೇವರಪುರದ ಬಾಪೂಜಿ ಎಜುಕೇಷನ್ ಸೊಸೈಟಿಯು ಚಿತ್ರದುರ್ಗದಲ್ಲಿ ಶ್ರೀಮತಿ ಹೇಮಾವತಿ ಕುವೆಂಪು ಮಹಾವಿದ್ಯಾಲಯದಲ್ಲಿ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:9.2.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 22 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕು ಕಲ್ಲೇದೇವರಪುರದ ಬಾಪೂಜಿ ಎಜುಕೇಷನ್ ಸೊಸೈಟಿಯು ಚಿತ್ರದುರ್ಗದಲ್ಲಿ ಪ್ರಾರಂಭಿಸಲಿರುವ ಶ್ರೀಮತಿ ಹೇಮಾವತಿ ಕುವೆಂಪು ಮಹಿಳಾ ಮಹಾವಿದ್ಯಾಲಯದಲ್ಲಿ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 438

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ, (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಚಿತ್ರದುರ್ಗ ಜಿಲ್ಲೆ, ಹೊಸದುರ್ಗದ ಶ್ರೀ ಬನಶ್ರೀ ಗ್ರಾಮೀಣ ನಗರಾಭಿವೃದ್ಧಿ ಮಹಿಳಾ ವಿವಿದೋದ್ದೇಶ ಸಂಸ್ಥೆ(ರಿ)ಯ ಇಂದಿರಾಗಾಂಧಿ ಕಾಲೇಜು ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:**
1. ದಿನಾಂಕ:21.2.2004ರ ಸಂ. ಇಡಿ 260 ಯುಆರ್‌ಸಿ 2004ರ ಸರ್ಕಾರಿ ಆದೇಶ.
2. ದಿನಾಂಕ:21.12.2005, ಸಂಖ್ಯೆ: F.SRO/NCTE/B.Ed/2005-06/4890ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:30.1.2006ರ ಕಾರ್ಯದರ್ಶಿ, ಶ್ರೀ ಬನಶ್ರೀ ಗ್ರಾಮೀಣ ನಗರಾಭಿವೃದ್ಧಿ ಮಹಿಳಾ ವಿವಿದೋದ್ದೇಶ ಸಂಸ್ಥೆ(ರಿ), ಹೊಸದುರ್ಗ, ಚಿತ್ರದುರ್ಗ ಜಿಲ್ಲೆ, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಸಲಾದ ಕರ್ನಾಟಕ

ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಚಿತ್ರದುರ್ಗ ಜಿಲ್ಲೆ ಹೊಸದುರ್ಗದ ಶ್ರೀ ಬನಶ್ರೀ ಗ್ರಾಮೀಣ ನಗರಾಭಿವೃದ್ಧಿ ಮಹಿಳಾ ವಿವಿದೋದ್ದೇಶ ಸಂಸ್ಥೆ(ರಿ)ಯ ಇಂದಿರಾಗಾಂಧಿ ಕಾಲೇಜ್ ಆಫ್ ಎಜುಕೇಷನ್ ಅನ್ನು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗದಲ್ಲಿ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:22.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:30.1.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಮೇಲ್ಕಂಡ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 01 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿತ್ರದುರ್ಗ ಜಿಲ್ಲೆ ಹೊಸದುರ್ಗದ ಶ್ರೀ ಬನಶ್ರೀ ಗ್ರಾಮೀಣ ನಗರಾಭಿವೃದ್ಧಿ ಮಹಿಳಾ ವಿವಿದೋದ್ದೇಶ ಸಂಸ್ಥೆ(ರಿ)ಯ ಇಂದಿರಾಗಾಂಧಿ ಕಾಲೇಜ್ ಆಫ್ ಎಜುಕೇಷನ್, ಹೊಸದುರ್ಗ, ಇದರ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 439

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ, (ವಿಶ್ವವಿದ್ಯಾಲಯಗಳು)

**ತಿದ್ದುಪಡಿ ಸಂಖ್ಯೆ:ಇಡಿ 125 ಡಿಸಿಇ 2003, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2006**

ಸರ್ಕಾರದ ಆದೇಶ ಸಂಖ್ಯೆ: ಇಡಿ 125 ಡಿಸಿಇ 2003, ದಿನಾಂಕ:15.9.2005ರ ಆದೇಶದ ಭಾಗದ ಕ್ರಮ ಸಂಖ್ಯೆ:(2)ರಲ್ಲಿ ಕಂಡುಬರುವ "195(1)(ಎ)" ಎಂದಿರುವುದನ್ನು "285(1)(ಎ)" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 440

ಸರ್ಕಾರದ ಉಪ ಕಾರ್ಯದರ್ಶಿ,

ಶಿಕ್ಷಣ ಇಲಾಖೆ, (ಉನ್ನತ ಶಿಕ್ಷಣ)

## ಆರ್ಥಿಕ ಸಚಿವಾಲಯ

**ವಿಷಯ:–** ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಗೆ ಹೆಚ್ಚಿನ ವೇತನ ಶ್ರೇಣಿಯನ್ನು ನೀಡುವ ಕುರಿತು.

**ಓದಲಾಗಿದೆ–**
1. ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 13 ಎಸ್‌ಆರ್‌ಪಿ 2000 ದಿನಾಂಕ: 9ನೇ ಜೂನ್ 2005.
2. ಯೋಜನಾ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅ.ಸ. ಪತ್ರ ಸಂಖ್ಯೆ:ಪಿಡಿ 45 ಎಸಿಎಸ್‌ಪಿಎಸ್ 2005 ದಿ:21.6.2005.

**ಪ್ರಸ್ತಾವನೆ:**

2005ರ ಅಧಿಕಾರಿ ಸಮಿತಿಯ ಶಿಫಾರಸ್ಸುಗಳಿಗೆ ಅನುಗುಣವಾಗಿ, ಮೇಲೆ (1) ರಲ್ಲಿ ಓದಲಾದ ದಿನಾಂಕ:9ನೇ ಜೂನ್ 2005ರ ಸರ್ಕಾರಿ ಆದೇಶದಲ್ಲಿ, 18 ವರ್ಗದ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಯನ್ನು ನಿಗದಿಗೊಳಿಸಿ ಸರ್ಕಾರವು ಆದೇಶ ಹೊರಡಿಸಿದೆ. ಮೇಲೆ (2) ರಲ್ಲಿ ಓದಲಾದ ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ ಅರೆ ಸರ್ಕಾರಿ ಪತ್ರದ ದಿನಾಂಕ:26.1.2005ರಲ್ಲಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಉಪ ನಿರ್ದೇಶಕರು ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿಗಳಿಗೆ ನಿಗಧಿ ಪಡಿಸಿದ ಸಂವಾದಿ ವೇತನ ಶ್ರೇಣಿಗಳನ್ನು ಯೋಜನಾ ಇಲಾಖೆಯಲ್ಲಿನ ತತ್ಸಮಾನ ಹುದ್ದೆಗಳಾದ ಉಪ ನಿರ್ದೇಶಕರು ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗಳಿಗೆ ಹೆಚ್ಚಿಸದೇ ಇರುವುದರಿಂದ, ತಾರತಮ್ಯ ಉಂಟಾಗಿರುವುದರ ಬಗ್ಗೆ ಸರ್ಕಾರದ ಆರ್ಥಿಕ ಇಲಾಖೆಯ ಗಮನಕ್ಕೆ ತರುತ್ತಾ, ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಉಪ ನಿರ್ದೇಶಕರ ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಗಳ ವೇತನ ಶ್ರೇಣಿಯನ್ನು ಹೆಚ್ಚಿಸುವುದರ ಮೂಲಕ ತಾರತಮ್ಯವನ್ನು ಸರಿಪಡಿಸಲು ಕೋರಲಾಗಿದೆ.

ಸರ್ಕಾರವು, ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಉಪ ನಿರ್ದೇಶಕರ ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು ಪ್ರಸ್ತಾವನೆಯನ್ನು ಪುನರ್ ಪರಿಶೀಲನೆ ಮಾಡಿದೆ. 2005ರ ಅಧಿಕಾರಿ ಸಮಿತಿಯ ವರದಿಯನ್ನು ಪರಿಶೀಲಿಸಲಾಗಿ, ಸಮಿತಿಯು, ಹಿಂದಿನ ವೇತನ ಆಯೋಗದ ಶಿಫಾರಸ್ಸಿನ ಮೇರೆಗೆ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಉಪ ನಿರ್ದೇಶಕರು ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿಗಳಿಗೆ ಹೆಚ್ಚಿನ ವೇತನ ಶ್ರೇಣಿಯನ್ನು ನಿಗಧಿಗೊಳಿಸಲು ಶಿಫಾರಸ್ಸು ಮಾಡಿದ್ದು, ಬಹುಶ: ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಉಪನಿರ್ದೇಶಕರು ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು ಹಿಂದಿನ ವೇತನ ಆಯೋಗವು ಯಾವುದೇ ಶಿಫಾರಸ್ಸು ಮಾಡದ ಕಾರಣಕ್ಕಾಗಿ, 2005ರ ಅಧಿಕಾರಿ ಸಮಿತಿಯು ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಉಪ ನಿರ್ದೇಶಕರು ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ನೀಡುವ ಕುರಿತು ಯಾವುದೇ ಶಿಫಾರಸ್ಸನ್ನು ಮಾಡಿರುವುದಿಲ್ಲ. ಅಲ್ಲದೆ, ಸರ್ಕಾರಿ ಆದೇಶ ದಿನಾಂಕ

09.06.2005ರಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಉಪ ನಿರ್ದೇಶಕರಿಗೆ ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿಗಳಿಗೆ ಹೆಚ್ಚಿನ ವೇತನ ಶ್ರೇಣಿಗಳನ್ನು ಮಂಜೂರು ಮಾಡುವ ಮೊದಲು ಇದ್ದ ಪರಿಸ್ಥಿತಿಯನ್ನು ಪರಿಶೀಲಿಸಿದಾಗ, ಯೋಜನಾ ಮತ್ತು ಸಾಂಖ್ಯಿಕ ಇಲಾಖೆ ಹಾಗೂ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯ ಎಲ್ಲಾ ವೃಂದಗಳ ಹುದ್ದೆಗಳಲ್ಲಿ ಸಂಪೂರ್ಣವಾದ ಸಾಮ್ಯತೆ ಇರಲಿಲ್ಲ. ಅಲ್ಲದೆ, ಈ ಎರಡೂ ಇಲಾಖೆಗಳಲ್ಲಿನ ವೃಂದಗಳ ರಚನೆಯಲ್ಲಿಯೂ ಸಹ ವ್ಯತ್ಯಾಸಗಳಿರುತ್ತವೆ. ಆದಾಗ್ಯೂ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಯ ವೇತನ ಶ್ರೇಣಿಗೆ ಸರಿಸಮವಾಗಿ ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಗೆ ರೂ.5200–9580ರ ವೇತನ ಶ್ರೇಣಿ ನೀಡುವುದಕ್ಕೆ ಸಮರ್ಥನೆ ಇದೆ ಎಂದು ಸರ್ಕಾರ ಪರಿಗಣಿಸಿದೆ. ಅದರಂತೆ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2000, ದಿನಾಂಕ: 23ನೇ ಫೆಬ್ರುವರಿ 2006**

ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳು 1999 ರ ನಿಯಮ 4 ಉಪ ನಿಯಮ (2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯ ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯನ್ನು ರೂ.4575–7400 ರಿಂದ ರೂ.5200–9580 ಕ್ಕೆ (ಎರಡೂ 1999 ರ ವೇತನ ಶ್ರೇಣಿಗಳು) ಪರಿಷ್ಕರಿಸಿ ಈ ಕೂಡಲೆ ಜಾರಿಗೆ ಬರುವಂತೆ ಆದೇಶಿಸಿದೆ.

ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯಲ್ಲಿ ಸಹಾಯಕ ಸಾಂಖ್ಯಿಕ ಹುದ್ದೆಯನ್ನು ಹೊಂದಿರುವ ಅಧಿಕಾರಿಗಳ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 43 ರ ಉಪ ಬಂಧಗಳನ್ವಯ ನಿಗಧಿಪಡಿಸತಕ್ಕದ್ದು.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2)

**FINANCE SECRETARIAT**

**Sub:** Revision of pay scale of Assistant Statistical Officers of the Planning and Statistics Department –reg.

**Read:**
1. G.O.No. FD 13 SRP 2000 dated:9th June 2005.
2. D.O.Letter No.PD 45 ACSPS 2005 dated 21-6-2005 from the Principal Secretary, Planning and Statistics Department.

**Preamble:**

On the basis of the recommendations of the Official Committee 2005, Government have issued orders allocating higher scales of pay to eighteen categories of posts vide Government Order dated 9th June 2005 read at (1) above. Principal Secretary to Government, Planning and Statistics Department in her D.O.letter dated 26-1-2005 read at (2) above, has brought to the notice of the Government in Finance Department that while higher pay scales have been allocated to the posts of Deputy Director and Assistant Statistical Officer of the Directorate of Economics and Statistics, corresponding higher pay scales have not been allocated to the posts of Deputy Director and Assistant Statistical Officer of the Planning and Statistics Department resulting in an anomalous situation and therefore she has requested for removal of this anomaly by allocating higher pay scales to the posts of Deputy Director and Assistant Statical Officer of the Planning and Statistics Department.

Government have reviewed the issue relating to allocation of higher pay scales to the posts of Deuty Director and Assistant Statistical Officer of the Planning and Statistics Department. It is observed from the Report of the Official Committee 2005 that while the Committee had recommended for assignment of higher pay scale to the posts of Deputy Director and Assistant Statistical Officer of the Directorate of Economics and Statistics mainly on the basis of the recommendations of the previous Pay Commissions, it did not make any recommendation for assignment of higher pay scales to the posts of Deputy Director and Assistant Statistical Officer of Planning and Statistics Department perhaps on the ground that there was no similar recommendations by the previsous Pay Commissions. Further, it is noticed that according to the position obtaining prior to the assignment of higher pay scales to the post of Deputy Director and Assistant Statistical Officer of the Directorate of Economics and Statistics by Government Order dated 9th June 2005, there was no absolute parity between the posts of Planning and Statistics Department and the Directorate of Economics and Statistics in all the cadres and there are differences in the cadre structure of these two departments. However, Government considers that there is some justification for assignment of higher pay scale of Rs.5200-9580 to the post of Assistant Statistical Officer in the Planning and Statistics Department on par with the pay scale of the post of

Assistant Statistical Officer of the Department of Economics and Statistics. Accordingly, the following orders are issued.

**Government Order No. FD 13 SRP 2000, Bangalore, Dated 23rd February 2006.**

In exercise of the powers conferred by sub-rule (2) of Rule 4 of the Karnataka Civil Services (Revised Pay) Rules, 1999, Government of Karnataka hereby order that the scale of pay applicable to the post of Assistant Statistical Officer of Planning and Statistics Department shall be revised from Rs.4575-8400 to Rs.5200-9580 (both 1999 pay scales) with immediate effect.

2. The pay of the officers holding the posts of Assistant Statistical Officers in the Planning and Statistics Department shall be fixed in the revised scales of pay in accordance with the provisions of Rule 43 of the Karnataka Civil Services Rules.

By Order and in the Name of the Governor of Karnataka,

**N. T. NAIK**

P.R. 333

Deputy Secretary to Government

Finance Department (Services-2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ::** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಉಪ ಕಾರ್ಯದರ್ಶಿ ಕಾರ್ಯಕಾರಿ) ಹುದ್ದೆಯ ಮುಂದುವರಿಕೆಯ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 95 ದಿನಾಂಕ: 18.12.1995.
2. ತಿದ್ದೋಲೆ ಸಂಖ್ಯೆ: ಸಿಆಸುಇ 25 ಸಸಿವಿ 95 ದಿನಾಂಕ: 20.12.1995.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2005, ದಿನಾಂಕ: 5.2.2005.
4. ಸಿ.ಆ.ಸು.ಇಲಾಖೆಯ (ಕಾರ್ಯಕಾರಿ) ಶಾಖೆಯ ಟಿಪ್ಪಣಿ ಸಂಖ್ಯೆ ಸಿಆಸುಇ 29 ಡಿಇವಿ 2006, ದಿನಾಂಕ: 21.1.2006.

**ಪ್ರಸ್ತಾವನೆ:**

ದಿನಾಂಕ: 20.12.1995ರ ತಿದ್ದೋಲೆಯೊಡನೆ ಓದಲಾದ ದಿನಾಂಕ: 18.12.1995ರ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಕಾರ್ಯಕಾರಿ) ವಿಭಾಗದಲ್ಲಿ ರೂ. 3825–5825ರ ವೇತನ ಶ್ರೇಣಿಯಲ್ಲಿ ಉಪ ಕಾರ್ಯದರ್ಶಿ ಹುದ್ದೆಯೊಂದನ್ನು ದಿನಾಂಕ: 31.3.1997 ರವರೆಗೆ ಕೆಳಕಂಡ ಆಪ್ತ ಸಹಾಯಕ ಸಿಬ್ಬಂದಿ ವರ್ಗದೊಡನೆ ಸೃಜಿಸಲಾಗಿದೆ.

| | | |
|---|---|---|
| 1. | ಶ್ರೀಘ್ರಲಿಪಿಗಾರರರು | 1 ಹುದ್ದೆ |
| 2. | ಕಿರಿಯ ಸಹಾಯಕ | 1 ಹುದ್ದೆ |
| 3. | ದಲಾಯತ್ | 1 ಹುದ್ದೆ |

ಈ ಹುದ್ದೆಗಳನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 5.2.2005ರ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾದ ಅವಧಿಯು ದಿನಾಂಕ: 31.3.2006ಕ್ಕೆ ಮುಕ್ತಾಯಗೊಳ್ಳಲಿದೆ.

ಸದರಿ ಹುದ್ದೆಗಳನ್ನು ಮುಂದುವರೆಸುವಂತೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು (ಕಾರ್ಯಕಾರಿ) ಪ್ರಸ್ತಾವನೆಯನ್ನು ಕಳುಹಿಸಿದ್ದು, ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 8 ಸಸಿವಿ 2006, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ^ಕಾರ್ಯಕಾರಿ^ ವಿಭಾಗದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಉಪ ಕಾರ್ಯದರ್ಶಿ ಹುದ್ದೆ ಹಾಗೂ ಪ್ರಸ್ತಾವನೆಯಲ್ಲಿ ತಿಳಿಸಿದ ಆಪ್ತ ಸಿಬ್ಬಂದಿ ವರ್ಗದ ಹುದ್ದೆಗಳನ್ನು ದಿನಾಂಕ: 1.4.2006 ರಿಂದ ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ದಿನಾಂಕ: 10.7.96ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರಲ್ಲಿನ ಅಧಿಕಾರ ಪ್ರತ್ಯಾಯೋಜನೆಯಂತೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 363

**ಯು.ಪಿ. ಪ್ರಭು**

ಸರ್ಕಾರದ ಅದೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ::** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಸಣ್ಣ ನೀರಾವರಿ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 18 ಸಸಿವಿ 96(1) ದಿಃ 25.6.96.
2. ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 18 ಸಸಿವಿ 96, ದಿಃ 6.6.97.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 2005, ದಿ: 25.2.2005.
4. ಅನಧಿಕೃತ ಟಿಪ್ಪಣಿ ಸಂಖ್ಯೆ: ಸನಿಇ 3 ಸೇಐಸು 2006, ದಿ: 10.2.06.

ಪ್ರಸ್ತಾವನೆಃ

ಸಣ್ಣ ನೀರಾವರಿ ಹಾಗೂ ಅಂತರ್ಜಲ ವಿಷಯಗಳನ್ನು ಪರಿಶೀಲಿಸುವ ಸಲುವಾಗಿ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕೆಳಕಂಡ ಹುದ್ದೆಗಳನ್ನು ದಿನಾಂಕಃ 22.6.1996 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| ಅ. | ಕಾರ್ಯದರ್ಶಿ, ಸಣ್ಣ ನೀರಾವರಿ ಹಾಗೂ ಅಂತರ್ಜಲ (ಭಾರತೀಯ ಆಡಳಿತ ಸೇವೆ ಸೂಪರ್ ಟೈಂ ಸ್ಕೇಲ್ ಹುದ್ದೆ). | 1 ಹುದ್ದೆ |
| | ಆಪ್ತ ಸಿಬ್ಬಂದಿ | |
| ಅ) | ಶೀಘ್ರಲಿಪಿಗಾರರು | 2 ಹುದ್ದೆಗಳು |
| ಆ) | ಭಾಷಾಂತರಕಾರರು | 1 ಹುದ್ದೆ |
| ಇ) | ಕಿರಿಯ ಸಹಾಯಕರು | 1 ಹುದ್ದೆ |
| ಈ) | ಚಾಲಕರು | 1 ಹುದ್ದೆ |
| ಉ) | ದಲಾಯತ್ | 2 ಹುದ್ದೆಗಳು |

ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಕಾರ್ಯದರ್ಶಿ ಸಣ್ಣ ನೀರಾವರಿ ಹಾಗೂ ಅಂತರ್ಜಲ ಹುದ್ದೆಯ ಪದನಾಮವನ್ನು ಕಾರ್ಯದರ್ಶಿ (ಸಣ್ಣ ನೀರಾವರಿ) ನೀರಾವರಿ ಇಲಾಖೆ ಎಂದು (ಈಗಿನ ಜಲಸಂಪನ್ಮೂಲ ಇಲಾಖೆ) ದಿನಾಂಕಃ 7.5.1997 ರಿಂದ ಜಾರಿಗೆ ಬರುವಂತೆ ಬದಲಾಯಿಸಿ, ಈ ಹುದ್ದೆಯನ್ನು ರಾಜ್ಯ ವೇತನ ಶ್ರೇಣಿ ರೂ.5825–175–6000–200–6800ರ ಪ್ರಧಾನ ಅಭಿಯಂತರರಿಂದ ನಿಯೋಜನೆ ಮೇಲೆ ತುಂಬಲು ಆದೇಶಿಸಲಾಗಿದೆ, ಹಾಗೂ ಸದರಿ ಹುದ್ದೆಗಳನ್ನು ದಿನಾಂಕಃ 22.6.1997 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ: 1.1.2005 ರಿಂದ 1 ವರ್ಷದವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಈ ಹುದ್ದೆಗಳನ್ನು ದಿನಾಂಕ: 1.1.2006 ರಿಂದ 5 ವರ್ಷಗಳವರಗೆ ಮುಂದುವರೆಸಲು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಅದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 87 ಸಸಿವಿ 2005, ಬೆಂಗಳೂರು, ದಿನಾಂಕಃ 24ನೇ ಫೆಬ್ರವರಿ 2006**

ಸರ್ಕಾರದ ಕಾರ್ಯದರ್ಶಿ (ಸಣ್ಣ ನೀರಾವರಿ) ಜಲಸಂಪನ್ಮೂಲ ಇಲಾಖೆ, ಈ ಹುದ್ದೆ ಹಾಗೂ ಕೆಳಕಂಡ ಆಪ್ತ ಸಿಬ್ಬಂದಿ ವರ್ಗವನ್ನು ದಿನಾಂಕಃ 1.1.2006 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| ಅ. | ಕಾರ್ಯದರ್ಶಿ, ಸಣ್ಣ ನೀರಾವರಿ ಹಾಗೂ ಅಂತರ್ಜಲ (ಭಾರತೀಯ ಆಡಳಿತ ಸೇವೆ ಸೂಪರ್ ಟೈಂ ಸ್ಕೇಲ್ ಹುದ್ದೆ). | 1 ಹುದ್ದೆ |
| | ಆಪ್ತ ಸಿಬ್ಬಂದಿ | |
| ಅ) | ಶೀಘ್ರಲಿಪಿಗಾರರು | 2 ಹುದ್ದೆಗಳು |
| ಆ) | ಭಾಷಾಂತರಕಾರರು | 1 ಹುದ್ದೆ |
| ಇ) | ಕಿರಿಯ ಸಹಾಯಕರು | 1 ಹುದ್ದೆ |
| ಈ) | ಚಾಲಕರು | 1 ಹುದ್ದೆ |
| ಉ) | ದಲಾಯತ್ | 2 ಹುದ್ದೆಗಳು |

ಈ ಆದೇಶವನ್ನು ಸಂಖ್ಯೆಃ ಆಇ 1 ಟಿಎಫ್‌ಪಿ/96, ದಿನಾಂಕಃ 10.7.1996 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 383

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

**ವಿಷಯ::** ನೀರಾವರಿ ಇಲಾಖೆಯಲ್ಲಿ ಸೃಜಿಸಲಾಗಿರುವ ಕೃಷ್ಣಾ ಭಾಗ್ಯ ಜಲನಿಗಮದ ವಿಶೇಷ ಕೋಶವನ್ನು ಅದರ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 94, ದಿನಾಂಕ: 7.7.94.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 99, ದಿನಾಂಕ: 22.10.99.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸಸಿವಿ 2005, ದಿ: 6.5.2005.
4. ನೀರಾವರಿ ಇಲಾಖೆಯ ಕಡತ ಸಂಖ್ಯೆ: ಜಸಂಇ 20 ಕೆಬಿಎನ್ 2006.

ಪ್ರಸ್ತಾವನೆ:

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕೃಷ್ಣಾ ಭಾಗ್ಯ ಜಲನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರ ಸಚಿವಾಲಯದ ನೀರಾವರಿ ಇಲಾಖೆಯಲ್ಲಿ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯಜಲನಿಗಮದ ವಿಶೇಷ ಕೋಶ ಒಂದನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 ಹುದ್ದೆ |
| 2 | ಅಧೀನ ಕಾರ್ಯದರ್ಶಿ | 1 ಹುದ್ದೆ |
| 3 | ಶಾಖಾಧಿಕಾರಿ | 1 ಹುದ್ದೆ |
| 4 | ಹಿರಿಯ ಸಹಾಯಕರು | 2 ಹುದ್ದೆ |
| 5 | ಸಹಾಯಕರು | 1 ಹುದ್ದೆ |
| 6 | ಕಿರಿಯ ಸಹಾಯಕರ | 1 ಹುದ್ದೆ |
| 7 | ಬೆರಳಚ್ಚುಗಾರರು | 1 ಹುದ್ದೆ |
| 8 | ಶೀಘ್ರಲಿಪಿಗಾರರು | 1 ಹುದ್ದೆ |
| 9 | ದಲಾಯತ್ | 1 ಹುದ್ದೆ |

ಮೇಲೆ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ, ನೀರಾವರಿ ಇಲಾಖೆ (ಕೃಷ್ಣಾ ಭಾಗ್ಯ ಜಲನಿಗಮ ವಿಶೇಷ ಕೋಶ) ಇವರ ಆಪ್ತ ಶಾಖೆಗೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| 1 | ಶೀಘ್ರಲಿಪಿಗಾರರು | 1 ಹುದ್ದೆ |
| 2 | ಕಿರಿಯ ಸಹಾಯಕರು | 1 ಹುದ್ದೆ |
| 3 | ಗ್ರೂಪ್ ^ಡಿ^ | 1 ಹುದ್ದೆ |

ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 31.3.2005 ರವರೆಗೆ ಮುಂದುವರೆಸಲಾಗಿದೆ.

ಮೇಲ್ಕಂಡ ಹುದ್ದೆಯ ಅವಧಿಯು ದಿನಾಂಕ: 31.3.2005ಕ್ಕೆ ಅಂತ್ಯಗೊಂಡಿರುವುದರಿಂದ ಈ ಹುದ್ದೆಗಳನ್ನು ದಿನಾಂಕ: 1.4.2006 ರಿಂದ 31.3.2007 ರವರೆಗೆ ಮುಂದುವರೆಸುವಂತೆ ಕೋರಿ ಜಲಸಂಪನ್ಮೂಲ ಇಲಾಖೆಯ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಕಡತದಲ್ಲಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಸಸೆವಿ 2006, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2.2006**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಕೃಷ್ಣಾ ಭಾಗ್ಯ ಜಲನಿಗಮದ ವಿಶೇಷ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ: 1.4.2006 ರಿಂದ 31.3.2007 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 ಹುದ್ದೆ |
| 2 | ಅಧೀನ ಕಾರ್ಯದರ್ಶಿ | 1 ಹುದ್ದೆ |
| 3 | ಶಾಖಾಧಿಕಾರಿ | 1 ಹುದ್ದೆ |
| 4 | ಹಿರಿಯ ಸಹಾಯಕರು | 2 ಹುದ್ದೆ |
| 5 | ಸಹಾಯಕರು | 1 ಹುದ್ದೆ |
| 6 | ಕಿರಿಯ ಸಹಾಯಕರ | 1 ಹುದ್ದೆ |
| 7 | ಬೆರಳಚ್ಚುಗಾರರು | 1 ಹುದ್ದೆ |
| 8 | ಶೀಘ್ರಲಿಪಿಗಾರರು | 1 ಹುದ್ದೆ |
| 9 | ದಲಾಯತ್ | 1 ಹುದ್ದೆ |

| **ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿಯವರ ಆಪ್ತ ಶಾಖೆ.** | | |
|---|---|---|
| 1 | ಶೀಘ್ರಲಿಪಿಗಾರರು | 1 ಹುದ್ದೆ |
| 2 | ಕಿರಿಯ ಸಹಾಯಕರು | 1 ಹುದ್ದೆ |
| 3 | ಗ್ರೂಪ್ ^ಡಿ^ | 1 ಹುದ್ದೆ |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆಃ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕಃ 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಪಿ.ಆರ್. 386

ಸರ್ಕಾರದ ಅಧಿನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ::** ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ (ಕ್ರೋಢೀಕರಣ) ಶಾಖೆಗೆ ಸೃಜಿಸಿರುವ ಹುದ್ದೆಗಳ ಮುಂದುವರಿಕೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 95 ದಿನಾಂಕ: 8.1.1996.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 98 ದಿನಾಂಕ: 18.10.2001.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2004 ದಿನಾಂಕ: 26.3.2005.
4. ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಂವ್ಯಶಾಇ 64 ಆಡಳಿತ 2004 ದಿನಾಂಕ: 5.2.2006.

**ಪ್ರಸ್ತಾವನೆ:**

1961 ರಿಂದ 1994 ರವರೆಗಿನ ಅಧಿನಿಯಮಗಳನ್ನು ಕ್ರೋಢೀಕರಿಸುವ ಉದ್ದೇಶದಿಂದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ (ಹಿಂದಿನ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ) ಅಧೀನದಲ್ಲಿ, ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ, ಕೆಳಕಂಡ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| | |
|---|---|
| 1. ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ | 1 ಹುದ್ದೆ |
| 2. ಶೀಘ್ರಲಿಪಿಗಾರರು | 1 ಹುದ್ದೆ |
| 3. ಬೆರಳಚ್ಚುಗಾರರು | 1 ಹುದ್ದೆ |

ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 18.10.2001ರ ಸರ್ಕಾರದ ಆದೇಶದಲ್ಲಿ ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಕ್ರೋಢೀಕರಣ ಶಾಖೆಯ ಒಂದು ಬೆರಳಚ್ಚುಗಾರ ಹುದ್ದೆಯನ್ನು ರದ್ದುಪಡಿಸಲಾಗಿರುತ್ತದೆ.

ಸಹಾಯಕ ಪ್ರಾರೂಪಕಾರರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಇವರು ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 7.2.2006ರ ಅನಧಿಕೃತ ಟಿಪ್ಪಣಿಯಲ್ಲಿ ಕ್ರೋಢೀಕರಣ ಶಾಖೆಯ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸಸಿವಿ 2006, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2006**

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ (ಹಿಂದಿನ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ) ಕ್ರೋಢೀಕರಣ ಶಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಕೆಳಕಂಡ ಹುದ್ದೆಗಳನ್ನು ದಿನಾಂಕ: 1.4.2006 ರಿಂದ ದಿನಾಂಕ: 31.3.2007 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | |
|---|---|
| 1. ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ | 1 ಹುದ್ದೆ |
| 2. ಶೀಘ್ರಲಿಪಿಗಾರರು | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರ ಮೇರೆಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 385

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

**ವಿಷಯ::** ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಹುದ್ದೆಗಳ ಮುಂದುವರಿಕೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ದಿನಾಂಕ: 7.3.2003.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ದಿನಾಂಕ: 3.6.2003.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 2004, ದಿನಾಂಕ: 6.1.2005.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 2005, ದಿನಾಂಕ: 14.7.2005.
5. ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಾಉಇ 98 ಎಂಇಎ 2005, ದಿನಾಂಕ: 18.2.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 7.3.2003 ದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಒಟ್ಟು 56 ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಹೆಚ್ಚುವರಿಯಾಗಿ ದಿನಾಂಕ: 7.3.2004 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮಾತ್ರ ಸೃಜಿಸಲಾಗಿದೆ. ಹಾಗೂ ದಿನಾಂಕ: 7.3.2003ರ ಆದೇಶದಲ್ಲಿ ಮಂಜೂರು ಮಾಡಲಾದ ಒಂದು ಸಹಾಯಕರ ಹುದ್ದೆಯನ್ನು ರದ್ದು ಪಡಿಸುವ ನಿಬಂಧನೆಗೊಳಪಟ್ಟು ಒಂದು ಉಪ ನಿರ್ದೇಶಕರ ಹಾಗೂ ಒಂದು ಹಿರಿಯ ಸಹಾಯಕರ ಹುದ್ದೆಗಳನ್ನು ದಿನಾಂಕ: 7.3.2003 ರಿಂದ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ: 3.6.2003 ರಲ್ಲಿ ಸೃಜಿಸಲಾದ ಜಂಟಿ ನಿರ್ದೇಶಕರ ಹುದ್ದೆಯನ್ನು ದಿನಾಂಕ: 7.3.2004 ರಿಂದ 6.3.2005 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಮಂಜೂರು ಮಾಡಿರುವ ಹುದ್ದೆಗಳನ್ನು ದಿನಾಂಕ: 7.3.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಡಿ.ಡಿ.ಪಿ.ಇ.ಆರ್. ಇವರು ಸದರಿ ಹುದ್ದೆಗಳ ಕಾಲಾವಧಿಯು ದಿನಾಂಕ: 6.3.2006ಕ್ಕೆ ಮುಕ್ತಾಯವಾಗಿರುವುದರಿಂದ ಆ ಹುದ್ದೆಗಳನ್ನು ಮುಂದುವರೆಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 2006, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಮೆಗಳ ಇಲಾಖೆಗೆ ಮಂಜೂರು ಮಾಡಿರುವ ಈ ಕೆಳಕಂಡ 58 ಹುದ್ದೆಗಳನ್ನು ದಿನಾಂಕ: 7.3.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಅಪರ ನಿರ್ದೇಶಕರು | 01 ಹುದ್ದೆ |
| 2. | ಆರ್ಥಿಕ ಸಲಹೆಗಾರರು | 01 ಹುದ್ದೆ |
| 3. | ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 02 ಹುದ್ದೆಗಳು |
| 4. | ಉಪ ನಿರ್ದೇಶಕರು ಹಾಗೂ ಪದನಿಮಿತ್ತ ಅಧೀನ ಕಾರ್ಯದರ್ಶಿ | 04 ಹುದ್ದೆಗಳು |
| 5. | ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಅಧೀನ ಕಾರ್ಯದರ್ಶಿ (ಆಡಳಿತ-1) | 01 ಹುದ್ದೆ |
| 6. | ಶಾಖಾಧಿಕಾರಿ | 01 ಹುದ್ದೆ |
| 7. | ಸಹಾಯಕ ನಿರ್ದೇಶಕರು | 02 ಹುದ್ದೆಗಳು |
| 8. | ಪತ್ರಾಂಕಿತ ಆಪ್ತ ಸಹಾಯಕರು | 01 ಹುದ್ದೆ |
| 9. | ಬಾಷಾಂತರಕಾರರು (ಶಾಖಾಧಿಕಾರಿ) | 01 ಹುದ್ದೆ |
| 10. | ಹಿರಿಯ ಸಹಾಯಕರು | 02 ಹುದ್ದೆಗಳು |
| 11. | ಲೆಕ್ಕಪತ್ರ ಅಧೀಕ್ಷಕರು | 01 ಹುದ್ದೆ |
| 12. | ಸಹಾಯಕ ಸಾಂಖ್ಯಿಕ ಅಧಿಕಾರಿ | 01 ಹುದ್ದೆ |
| 13. | ಶೀಘ್ರಲಿಪಿಗಾರರು (ಗಣಕ ಯಂತ್ರ ಜ್ಞಾನವನ್ನು ಹೊಂದಿರುವವರು) | 12 ಹುದ್ದೆಗಳು |
| 14. | ಸಹಾಯಕರು | 03 ಹುದ್ದೆಗಳು |
| 15. | ಡಾಟಾ ಎಂಟ್ರಿ ಆಪರೇಟರ್ | 02 ಹುದ್ದೆಗಳು |
| 16. | ಅಕೌಂಟೆಂಟ್ : ಕ್ಯಾಷಿಯರ್ | 02 ಹುದ್ದೆಗಳು |
| 17. | ಕಿರಿಯ ಸಹಾಯಕರು | 05 ಹುದ್ದೆಗಳು |
| 18. | ಬೆರಳಚ್ಚುಗಾರರು | 01 ಹುದ್ದೆ |
| 19. | ಚಾಲಕರು | 04 ಹುದ್ದೆಗಳು |
| 20. | ದಲಾಯತ್ | 11 ಹುದ್ದೆಗಳು |
| | **ಒಟ್ಟು** | **58 ಹುದ್ದೆಗಳು** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 384

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಆರ್ಥಿಕ ಸಚಿವಾಲಯ

**ವಿಷಯ :** ಪಿಂಚಣಿದಾರರು/ ಕುಟುಂಬ ಪಿಂಚಣಿದಾರರಿಗೆ ಮಧ್ಯಂತರ ಪರಿಹಾರ ಮಂಜೂರಾತಿ ಬಗ್ಗೆ.

**ಆದೇಶ ಸಂಖ್ಯೆ: ಆಇ (ವಿಶೇಷ) 01 ಪಿಇಎನ್ 2006, ಬೆಂಗಳೂರು, ದಿನಾಂಕ:4ನೇ ಏಪ್ರಿಲ್, 2006**

ಕರ್ನಾಟಕ ರಾಜ್ಯ ಸರ್ಕಾರವು ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಹಾಗೂ ನೂತನ ವೇತನ ರಚನೆ ರೂಪಿಸಲು ರಚಿಸಿರುವ 5ನೇ ರಾಜ್ಯ ವೇತನ ಆಯೋಗವು ಒಂದು ಮಧ್ಯಂತರ ವರದಿಯನ್ನು ಸಲ್ಲಿಸಿ, ಇತರ ವಿಷಯಗಳನ್ನೊಳಗೊಂಡಂತೆ ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ಮಾಸಿಕ ಕನಿಷ್ಠ ರೂ.150/- ಮತ್ತು ಗರಿಷ್ಠ ರೂ.750/-ಗಳ ಮಿತಿಗೊಳಪಟ್ಟು ಅವರ ಮೂಲ ನಿವೃತ್ತಿ ವೇತನ/ ಕುಟುಂಬ ನಿವೃತ್ತಿ ವೇತನದ ಶೇ.10ರ ದರದಲ್ಲಿ ಮಧ್ಯಂತರ ಪರಿಹಾರವನ್ನು ದಿನಾಂಕ: 01.01.2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತದೆ.

ಸರ್ಕಾರವು 5ನೇ ವೇತನ ಆಯೋಗದ ಮಧ್ಯಂತರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ಮಾಸಿಕ ಕನಿಷ್ಠ ರೂ.150/- ಮತ್ತು ಗರಿಷ್ಠ ರೂ.750/- ಗಳ ಮಿತಿಗೊಳಪಟ್ಟು ಅವರ ಮೂಲ ನಿವೃತ್ತಿ ವೇತನ/ ಕುಟುಂಬ ನಿವೃತ್ತಿ ವೇತನದ ಶೇ.10ರ ದರದಲ್ಲಿ ಮಧ್ಯಂತರ ಪರಿಹಾರವನ್ನು ದಿನಾಂಕ: 01.04.2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಹರ್ಷಿಸುತ್ತದೆ.

ಈ ಆದೇಶದ ಮೂಲಕ ಮಂಜೂರು ಮಾಡಿರುವ ಮಧ್ಯಂತರ ಪರಿಹಾರದ ಮೊತ್ತವನ್ನು ಪ್ರತ್ಯೇಕ ಅಂಶವನ್ನಾಗಿ ತೋರಿಸುವುದು ಮತ್ತು 5ನೇ ಆಯೋಗದ ಶಿಫಾರಸ್ಸುಗಳ ಮೇರೆಗೆ ಮಾಡಲಾಗುವ ನಿವೃತ್ತಿ ವೇತನ: ಕುಟುಂಬ ನಿವೃತ್ತಿ ವೇತನ ಪರಿಷ್ಕರಣೆಯ ಪರಿಣಾಮವಾಗಿ ಪಡೆಯುವ ಹೆಚ್ಚಳದಲ್ಲಿ ಹೊಂದಾಣಿಕೆ ಮಾಡಲಾಗುವುದು.

ಮಧ್ಯಂತರ ಪರಿಹಾರದ ಕಾರಣದಿಂದ ಸಂದಾಯ ಮಾಡಲು ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಾಂಕಗೊಳಿಸತಕ್ಕದ್ದು. ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಶವನ್ನು ಕಡೆಗಣಿಸತಕ್ಕದ್ದು.

ಈ ಆದೇಶದಲ್ಲಿ ಮಂಜೂರಾದ ಮಧ್ಯಂತರ ಪರಿಹಾರದ ಮೊತ್ತವನ್ನು ಯಾವುದೇ ಕಾರಣಕ್ಕೂ ತುಟ್ಟಿಭತ್ಯೆ ಅಥವಾ ಇನ್ನಿತರ ಉದ್ದೇಶಗಳಿಗೆ ಉಪಲಬ್ದಗಳೆಂದು ಪರಿಗಣಿಸತಕ್ಕದ್ದಲ್ಲ.

ಈ ಮಧ್ಯಂತರ ಪರಿಹಾರದ ವೆಚ್ಚವನ್ನು ಪಿಂಚಣಿ ವೆಚ್ಚವನ್ನು ಭರಿಸುವ ಲೆಕ್ಕ ಶೀರ್ಷಿಕೆಯಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್. ಮುರಳಿ ಕೃಷ್ಣ**

ಪಿ.ಆರ್.529

ವಿಶೇಷಾಧಿಕಾರಿ (ವಿಶ್ರಾಂತಿ ವೇತನ),

ಆರ್ಥಿಕ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಟಿ. ಮುನಿಯಪ್ಪ, ನಿವೃತ್ತ ಹಿರಿಯ ಉಪ ನೋಂದಣಾಧಿಕಾರಿ, ನೋಂದಣಿ ಹಾಗೂ ಮುದ್ರಾಂಕ ಇಲಾಖೆ, ಇವರಿಂದ ಸರ್ಕಾರಕ್ಕೆ ಆಗಿರುವ ರಾಜಸ್ವ ಹಾನಿ ವಸೂಲಿ ಕುರಿತು.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 44 ಮುನೊಸೇ(2) 2005, ಬೆಂಗಳೂರು, ದಿನಾಂಕ: 13ನೇ ಮಾರ್ಚ್, 2006**

**ಓದಲಾಗಿದೆ:** (1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಸಿಆರ್‌ಪಿ-56/ 97-98-II ದಿನಾಂಕ: 03.03.2005.

(2) ಸರ್ಕಾರದ ಪತ್ರ ಸಂಖ್ಯೆ:ಕಂಇ 44 ಮುನೊಸೇ(2) 2005, ದಿನಾಂಕ: 20.12.2005.

(3) ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ ಪತ್ರ ಸಂಖ್ಯೆ:ಪಿಎಸ್‌ಸಿ 170 ಸಿಎನ್‌ಎಸ್ 05, ದಿನಾಂಕ:13.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ ಶ್ರೀ ಟಿ. ಮುನಿಯಪ್ಪ, ಹಿರಿಯ ಉಪ ನೋಂದಣಾಧಿಕಾರಿ, ಹಾಲಿ ನಿವೃತ್ತ, ನೋಂದಣಿ ಹಾಗೂ ಮುದ್ರಾಂಕ ಇಲಾಖೆ, ಇವರು ಈ ಹಿಂದೆ ಚಿಕ್ಕಮಗಳೂರು ಉಪ ನೋಂದಣಿ ಕಛೇರಿಯಲ್ಲಿ ಉಪ ನೋಂದಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅಂದಿನ ಪ್ರಚಲಿತ ಮಾರುಕಟ್ಟೆ ಬೆಲೆಗಿಂತ ಕಡಿಮೆ ಬೆಲೆಗೆ ದಸ್ತಾವೇಜುಗಳನ್ನು ನೋಂದಾಯಿಸಿ ಸರ್ಕಾರಕ್ಕೆ ರೂ.3,26,890/-ಗಳ ರಾಜಸ್ವ ನಷ್ಟ ಉಂಟು ಮಾಡಿದ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಗಳಿಗೆ ಕಾರಣ ಕೇಳುವ ನೋಟೀಸು ಆರೋಪ ಪಟ್ಟಿ ಜಾರಿ ಮಾಡಿ, ಅವರಿಂದ ಲಿಖಿತ ಹೇಳಿಕೆ ಪಡೆದು ಪರಿಶೀಲಿಸಿ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ಇಲಾಖಾ ವಿಚಾರಣೆಗೆ ಆದೇಶ ಮಾಡಿದ್ದು, ಅದರ ಪ್ರಕಾರ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ದಿನಾಂಕ: 04.12.2004 ರಂದು ವಿಚಾರಣಾ ವರದಿಯನ್ನು ಸಲ್ಲಿಸಿದ್ದು ಅದರ ಪ್ರಕಾರ ಆರೋಪ ಪಟ್ಟಿಯಲ್ಲಿಯ ಕ್ರಮಸಂಖ್ಯೆ: 1 ರಿಂದ 17ರಲ್ಲಿಯ ದಸ್ತಾವೇಜುಗಳಿಗೆ ಅನ್ವಯಿಸಿದ ಆರೋಪವು ರುಜುವಾತಾಗಿರುತ್ತದೆಂದು ವರದಿ ನೀಡಿರುತ್ತಾರೆ. ಆರೋಪ ಸಾಬೀತಾಗಿರುವ 17 ಪ್ರಕರಣಗಳಲ್ಲಿ ಸರ್ಕಾರಕ್ಕೆ ಮುದ್ರಾಂಕ ಶುಲ್ಕ ರೂ.2,69,810/- ಹಾಗೂ ನೋಂದಣಿ ಶುಲ್ಕ ರೂ.48,140/-ಗಳು ಒಟ್ಟು ರೂ.3,17,950/-ಗಳ ರಾಜಸ್ವ ಹಾನಿಯಾಗಿರುತ್ತದೆ. ಆಪಾದಿತ ಅಧಿಕಾರಿಗಳಿಗೆ 2ನೇ ಕಾರಣ ಕೇಳುವ ನೋಟೀಸು ಜಾರಿ ಮಾಡಿ ಹೇಳಿಕೆ ಪಡೆದು, ಪರಿಶೀಲಿಸಿ, ಸದರಿ ಅಧಿಕಾರಿಗಳು ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರ ಪ್ರಕಾರ ಕ್ರಮ ಜರುಗಿಸಲು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಸರ್ಕಾರಕ್ಕೆ ಹಾನಿಯಾಗಿರುವ ರಾಜಸ್ವವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 (1)(ಎ) ಮತ್ತು 5ರ ಪ್ರಕಾರ ಆಪಾದಿತ ಅಧಿಕಾರಿಯ ಡಿ.ಸಿ.ಆರ್.ಜಿ.ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಮತ್ತು ಅವರ ನಿವೃತ್ತ ವೇತನದ 3/1 ಭಾಗವನ್ನು ವಸೂಲು ಮಾಡಲು ತೀರ್ಮಾನಿಸಿ ಈ ಕುರಿತು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 213(4)ರ ಪ್ರಕಾರ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆಯಲು ಓದಲಾದ (2)ರಲ್ಲಿ ಕೋರಲಾಯಿತು. ಓದಲಾದ (3)ರ ಪ್ರಕಾರ ಕರ್ನಾಟಕ ಲೋಕ ಸೇವಾ ಆಯೋಗವು

ಆಪಾದಿತ ಅಧಿಕಾರಿಗಳಾದ ಶ್ರೀ ಟಿ. ಮುನಿಯಪ್ಪ, ಹಿರಿಯ ಉಪ ನೋಂದಣಾಧಿಕಾರಿ, ನಿವೃತ್ತ ಇವರ ಡಿ.ಸಿ.ಆರ್.ಜಿ.ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಹಾಗೂ ಅವರ ನಿವೃತ್ತ ವೇತನದ 3/1 ಭಾಗವನ್ನು ವಸೂಲು ಮಾಡಲು ಸಹಮತಿಯನ್ನು ನೀಡಿರುತ್ತದೆ.

ಆಪಾದಿತ ಅಧಿಕಾರಿಗಳಾದ ಶ್ರೀ ಟಿ. ಮುನಿಯಪ್ಪ, ಹಿರಿಯ ಉಪ ನೋಂದಣಾಧಿಕಾರಿ, ನಿವೃತ್ತ, ಇವರಿಂದ ಸರ್ಕಾರಕ್ಕೆ ಆಗಿರುವ ರಾಜಸ್ವ ಹಾನಿಯನ್ನು ವಸೂಲು ಮಾಡುವುದು ತಕ್ಕುದ್ದುದಾದುದೆಂಬ ನಿರ್ಣಯಕ್ಕೆ ಸರ್ಕಾರವು ಬಂದಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿಶ್ಲೇಷಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಟಿ. ಮುನಿಯಪ್ಪ, ಹಿರಿಯ ಉಪ ನೋಂದಣಾಧಿಕಾರಿ, ನಿವೃತ್ತ, ಇವರಿಂದ ಸರ್ಕಾರದ ಬೊಕ್ಕಸಕ್ಕೆ ಉಂಟಾಗಿರುವ ರೂ.3,17,950/-ಗಳ ರಾಜಸ್ವ ನಷ್ಟವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(1)(ಎ)ರ ಪ್ರಕಾರ ತಡೆಹಿಡಿಯಲಾಗಿರುವ ಡಿ.ಸಿ.ಆರ್.ಜಿ. ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಉಳಿದ ಹಣವನ್ನು ನಿಯಮ 214(5)ರ ಪ್ರಕಾರ ಅವರ ನಿವೃತ್ತಿ ದಿನಾಂಕದಿಂದ ಅವರಿಗೆ ಲಭ್ಯವಾಗಬಹುದಾದ ನಿವೃತ್ತಿ ವೇತನದ 3/1 ಭಾಗವನ್ನು ವಸೂಲು ಮಾಡುವ ಹಾಗೂ ಬಾಕಿ ಉಳಿಯುವ ಹಣವನ್ನು Arears of Land Revenue ಎಂದು ವಸೂಲು ಮಾಡುವ ದಂಡನೆಯನ್ನು ಈ ಮೂಲಕ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್.447

ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ :** ಧಾರವಾಡ ಜಿಲ್ಲೆಯ ಹುಬ್ಬಳ್ಳಿಯಲ್ಲಿರುವ ಶ್ರೀ ತುಳಜಾ ಭವಾನಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003.

(2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ ಸಿಆರ್/ 2/ 2004-05 ದಿನಾಂಕ: 26.06.2004 ಮತ್ತು 18.10.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ:(1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮಸಂಖ್ಯೆ: (2)ರ ಪತ್ರದಲ್ಲಿ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ದಾಜೀಬಾನಪೇಟೆ ಶ್ರೀ ತುಳಜಾ ಭವಾನಿ ದೇವಸ್ಥಾನವು ಸೂರ್ಯವಂಶ ಸಹಸ್ರಾರ್ಜುನ ಕ್ಷತ್ರಿಯ ಸಮಾಜಕ್ಕೆ ಸೇರಿರುತ್ತದೆ. ಧಾರ್ಮಿಕ ದತ್ತಿ ಆಯುಕ್ತರು ಸದರಿ ದೇವಸ್ಥಾನದ ನೋಂದಾಯಿತ ದಾಖಲೆಗಳನ್ನು ಪರಿಶೀಲಿಸಿ, ಸೂರ್ಯವಂಶ ಸಹಸ್ರಾರ್ಜುನ ಕ್ಷತ್ರಿಯ ಸಮಾಜಕ್ಕೆ ಸೇರಿರುವುದು ಸ್ಪಷ್ಟವಾಗಿರುವುದರಿಂದ ಈ ದೇವಸ್ಥಾನವನ್ನು ನೂತನ ಕಾಯಿದೆ ವಿಧಿ 1 ಉಪ ವಿಧಿ 4(ii)ರ ಪ್ರಕಾರ ಇಲಾಖಾ ವ್ಯಾಪ್ತಿಯಿಂದ ಹೊರತುಪಡಿಸಿ, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈಬಿಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 101 ಮುಅಬಿ 2004, ಬೆಂಗಳೂರು, ದಿನಾಂಕ: 14ನೇ ಮಾರ್ಚ್, 2006**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(ii)ರ ಪ್ರಕಾರ “ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ” ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ದಾಗೇಬಾನಪೇಟ ಶ್ರೀ ತುಳಜಾ ಭವಾನಿ ದೇವಸ್ಥಾನ ಕ್ರಮ ಸಂಖ್ಯೆ: 51, ಪುಟ ಸಂಖ್ಯೆ: 297ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್.449

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ).

**ವಿಷಯ :** ಬಸವನಗುಡಿ ಉಪ ನೋಂದಣಿ ಕಛೇರಿ ಕಟ್ಟಡದ ಬಾಡಿಗೆ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** (1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ/ 8/ 94-95, ದಿನಾಂಕ: 08.09.2003.

(2) ಕಾರ್ಯಪಾಲಕ ಅಭಿಯಂತರರು, ಕಟ್ಟಡಗಳ ವಿಭಾಗ ಇವರ ಪತ್ರ ಸಂಖ್ಯೆ: ಕವಿ-2: ಜೇಇ-9:2004-05/ 5339-40, ದಿನಾಂಕ: 27.09.2004.

(3) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ-8/ 94-95, ದಿನಾಂಕ: 31.01.2006/ 10.02.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 08.09.2003ರ ಪತ್ರದಲ್ಲಿ ಬಸವನಗುಡಿ ಉಪ ನೋಂದಣಿ ಕಛೇರಿ ಕಾರ್ಯನಿರ್ವಹಿಸುತ್ತಿರುವ ಕಟ್ಟಡದ ಮಾಲಿಕರು ಕಟ್ಟಡವನ್ನು ತೆರವುಗೊಳಿಸುವಂತೆ ಕೋರಿ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಹೂಡಿರುವ ಹಿನ್ನೆಲೆಯಲ್ಲಿ ಸದರಿ ಕಛೇರಿಯನ್ನು ಚಾಮರಾಜಪೇಟೆಯ 3ನೇ ಮುಖ್ಯ ರಸ್ತೆಯಲ್ಲಿರುವ ಶ್ರೀ ರಾಮೇಶ್ವರ ದೇವಾಲಯಕ್ಕೆ ಸೇರಿದ 3320 ಚ.ಅ. ವಿಸ್ತೀರ್ಣವುಳ್ಳ (ನೆಲ ಮಹಡಿ ಮತ್ತು

ಒಂದನೇ ಮಹಡಿ ಸೇರಿ) ವಾಣಿಜ್ಯ ಸಂಕೀರ್ಣದಲ್ಲಿರುವ ಕಟ್ಟಡಕ್ಕೆ ಬೆಂಗಳೂರು ಮಹಾನಗರ ಪಾಲಿಕೆಯವರು ತಂದಿರುವ ಬಾಡಿಗೆ ಆಧಾರದ ಮೇಲೆ ಚದರ ಅಡಿ ಒಂದಕ್ಕೆ ರೂ.10/- ರಿಂದ 12/-ರಂತೆ ಸಾರ್ವಜನಿಕರ ಹಿತದೃಷ್ಟಿಯಿಂದ ಸ್ಥಳಾಂತರಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ: 27.09.2004ರ ಪತ್ರದಲ್ಲಿ ಕಾರ್ಯಪಾಲಕ ಅಭಿಯಂತರರು, ಕಟ್ಟಡಗಳ ವಿಭಾಗ ಇವರು ಸ್ಥಳ ಪರಿಶಿಲನೆ ಮಾಡಿ 3320 ಚ.ಅ. ವಿಸ್ತೀರ್ಣವುಳ್ಳ (ನೆಲ ಮಹಡಿ ಮತ್ತು ಒಂದನೇ ಮಹಡಿ ಸೇರಿ) ಕಟ್ಟಡಕ್ಕೆ ಲೋಕೋಪಯೋಗಿ ಇಲಾಖೆ ಸಂಹಿತೆಯಂತೆ ತಿಂಗಳ ಒಟ್ಟು ಬಾಡಿಗೆ ರೂ.54,373/- ರೂ.ಗಳಾಗುತ್ತದೆ ಅಂದರೆ ಪ್ರತಿ ಚದರ ಪ್ಲಿಂತ್ ಏರಿಯಾಗೆ 16.40 ರೂ.ಗಳಾಗುತ್ತದೆ ಎಂದು ತಿಳಿಸಿರುತ್ತಾರೆ.

3. ಮೇಲೆ (3) ರಲ್ಲಿ ಓದಲಾದ ದಿನಾಂಕ: 31.01.2006/ 10.02.2006ರ ಪತ್ರದಲ್ಲಿ ವಾಣಿಜ್ಯ ಸಂಕೀರ್ಣವನ್ನು ಕಛೇರಿ ಕೆಲಸದ ಉಪಯೋಗಕ್ಕಾಗಿ ದಿನಾಂಕ: 11.12.2003ರಂದು ಕಛೇರಿಯನ್ನು ಸ್ಥಳಾಂತರಿಸಿರುವುದರಿಂದ ದಿನಾಂಕ: 11.12.2003 ರಿಂದ ಜಾರಿಗೆ ಬರುವಂತೆ ಬಾಡಿಗೆ ನಿಗದಿಪಡಿಸಲು ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 17 ಮುನೋಸ 2003, ಬೆಂಗಳೂರು, ದಿನಾಂಕ: 18ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಕಾರಣಗಳ ಹಿನ್ನೆಲೆಯಲ್ಲಿ, ಬಸವನಗುಡಿ ಉಪ ನೋಂದಣಿ ಕಛೇರಿಯು ಕಾರ್ಯನಿರ್ವಹಿಸುತ್ತಿರುವ ಚಾಮರಾಜಪೇಟೆಯ 3ನೇ ಮುಖ್ಯ ರಸ್ತೆಯಲ್ಲಿರುವ ಶ್ರೀ ರಾಮೇಶ್ವರ ದೇವಾಲಯಕ್ಕೆ ಸೇರಿದ ವಾಣಿಜ್ಯ ಸಂಕೀರ್ಣದಲ್ಲಿರುವ 3320 ಚ.ಅ. ವಿಸ್ತೀರ್ಣವುಳ್ಳ (ನೆಲ ಮಹಡಿ ಮತ್ತು ಒಂದನೇ ಮಹಡಿ ಸೇರಿ) ಕಟ್ಟಡಕ್ಕೆ ದಿನಾಂಕ: 12.09.2003 ರಿಂದ ತಿಂಗಳ ಒಟ್ಟು ಬಾಡಿಗೆ ರೂ.54,373/- ರೂ.ಗಳನ್ನು ನಿಗದಿಪಡಿಸಿ ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 142 ಬಿಆರ್‌ಎಸ್ 2006, ದಿನಾಂಕ: 14.03.2006 ರನ್ವಯ ಲೆಕ್ಕ ಶೀರ್ಷಿಕೆ "2030- ಮುದ್ರಾಂಕ ಮತ್ತು ನೋಂದಣಿ" ಇದರಡಿಯಲ್ಲಿ 202.00 ಲಕ್ಷ ಅನುದಾನವನ್ನು ಮರುಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲಾದ ಮೊತ್ತದಲ್ಲಿ ಭರಿಸುವಂತೆ ಸೂಚಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್.450

ಸರ್ಕಾರದ ಅಧೀನ ಕಾರ್ಯದರ್ಶಿ (ಅ.ಪ್ರ.)

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ :** ಶ್ರೀ ಕೆ. ಸಾಹೇಬಗೌಡ, ನಿವೃತ್ತ ತಹಶೀಲ್ದಾರ್ ಮತ್ತು ಇತರರ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ಬಗ್ಗೆ- ಶ್ರೀ ಕೆ. ಸಾಹೇಬಗೌಡ ನಿವೃತ್ತ ತಹಶೀಲ್ದಾರ್ ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ಕಂಇ 34: ಎಡಿಇ:2002, ದಿನಾಂಕ: 29.05.2004.

(2) ಶ್ರೀ ಕುಲಕರ್ಣಿ ರಾಮರಾವ್ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಇವರ ವಿಚಾರಣಾ ವರದಿ ದಿನಾಂಕ: 24.01.2005.

(3) ಎರಡನೇ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಕಂಇ 34: ಎಡಿಇ: 2002 ದಿನಾಂಕ: 20.06.2005.

(4) ಶ್ರೀ ಕೆ. ಸಾಹೇಬಗೌಡ, ನಿವೃತ್ತ ತಹಶೀಲ್ದಾರ್, ಇವರ ಲಿಖಿತ ಸಮಜಾಯಿಷಿ ದಿನಾಂಕ: 22.07.2005.

**ಪ್ರಸ್ತಾವನೆ:**

ಶ್ರೀ ಕೆ. ಸಾಹೇಬಗೌಡ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು), ಜೇವರ್ಗಿ ಗುಲ್ಬರ್ಗಾ ಜಿಲ್ಲೆ, ಎಂದು ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಗುಲ್ಬರ್ಗಾ ಜಿಲ್ಲೆ ಜೇವರ್ಗಿ ತಾಲ್ಲೂಕಿನ ಗುಳಿಹಾಳ ಡಿ ಗ್ರಾಮದ ಸರ್ವೆ ನಂ.10 ಮತ್ತು 11ಗಳಲ್ಲಿನ ಭೂನ್ಯಾಯ ಮಂಡಳಿ, ಜೇವರ್ಗಿಯ ಆದೇಶಕ್ಕೆ ವ್ಯತಿರಿಕ್ತವಾಗಿ ಕ್ರಮ ತೆಗೆದುಕೊಂಡಿದ್ದಕ್ಕಾಗಿ ಶ್ರೀ ಕೆ. ಸಾಹೇಬಗೌಡ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು) ಜೇವರ್ಗಿ ತಾಲ್ಲೂಕು ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ದಿನಾಂಕ: 29.05.2004ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರಾದ ಶ್ರೀ ಕುಲಕರ್ಣಿ ರಾಮರಾವ್ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ: 24.01.2005ರಲ್ಲಿ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಈ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು ಸದರಿ ವಿಚಾರಣಾ ವರದಿಯಲ್ಲಿ ಶ್ರೀ ಕೆ.ಸಾಹೇಬಗೌಡ, ಇವರ ವಿರುದ್ಧದ ಆರೋಪವು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಶ್ರೀ ಕೆ. ಸಾಹೇಬಗೌಡ ನಿವೃತ್ತ ತಹಶೀಲ್ದಾರ್, ಇವರ ವಿರುದ್ಧದ ಆರೋಪವು ಸಾಬೀತಾಗಿದೆ ಎಂದು ವಿಚಾರಣಾ ವರದಿಯಲ್ಲಿ ಕಂಡು ಬಂದ ಕಾರಣ ಹಾಗೂ ಸದರಿ ಆಪಾದಿತ ಅಧಿಕಾರಿಯು ಈಗ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳನ್ವಯ ದಂಡನೆ ವಿಧಿಸಲು ಅವಕಾಶವಿಲ್ಲದ ಕಾರಣ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಸೂಕ್ತ ದಂಡನೆಯನ್ನು ವಿಧಿಸಲು ಸರ್ಕಾರವು ನಿರ್ಧರಿಸಿ ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ದಿನಾಂಕ: 20.06.2005ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ವಿಚಾರಣಾ ವರದಿಯ ಪ್ರತಿಯೊಂದಿಗೆ ನೀಡಲಾಗಿತ್ತು. ಇದಕ್ಕೆ ಉತ್ತರವಾಗಿ ಆರೋಪಿತ ಅಧಿಕಾರಿಯು ಮೇಲೆ ಕ್ರ.ಸಂ.(4)ರಲ್ಲಿ ಓದಲಾದ ದಿನಾಂಕ: 22.07.2005ರ ಲಿಖಿತ ಸಮಜಾಯಿಷಿಯಲ್ಲಿ ಕೆ.ಸಿ.ಎಸ್.ಆರ್. ನಿಯಮಗಳ ನಿಯಮ 214ರಡಿಯಲ್ಲಿನ ನಡವಳಿಗಳಿಂದ ತಮ್ಮನ್ನು ಋಣಮುಕ್ತರನ್ನಾಗಿ ಮಾಡುವಂತೆ ಕೋರಿದ್ದಾರೆ.

ಈ ಪ್ರಕರಣದಲ್ಲಿನ ವಿಚಾರಣಾ ವರದಿ ಹಾಗೂ ಆರೋಪಿತ ಅಧಿಕಾರಿ ಸಲ್ಲಿಸಿರುವ ಲಿಖಿತ ಹೇಳಿಕೆ ಇವುಗಳನ್ನು ದಾಖಲೆಗಳ ಆಧಾರದಿಂದ ಪರಿಶೀಲಿಸಲಾಗಿ, ಮೇಲ್ಕಂಡ ಅಧಿಕಾರಿ ಕರ್ತವ್ಯಚ್ಯುತಿ ಎಸಗಿರುವುದು ಸಾಬೀತಾಗಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 34: ಎಡಿಇ: 2002, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಸಾಹೇಬಗೌಡ, ನಿವೃತ್ತ ತಹಶೀಲ್ದಾರ್, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(1)(2)ರನ್ವಯ ಇವರ ಪಿಂಚಣಿಯಲ್ಲಿ ರೂ.200/-ರಂತೆ 5 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 451

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

**ವಿಷಯ :** ಶ್ರೀ ಆರ್.ಎಸ್. ಪಡವಳಕರ್, ತಹಶೀಲ್ದಾರ್(ನಿವೃತ್ತ) ಇವರ ವಿರುದ್ಧ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:** (1) ದಿನಾಂಕ: 06.03.2000ರ ಸರ್ಕಾರಿ ಆದೇಶ ಸಂಖ್ಯೆ: ಕಂಇ: 93ಎಡಿಇ 96.

(2) ಸಾಗರ ಉಪವಿಭಾಗಾಧಿಕಾರಿಗಳ ಹಾಗೂ ವಿಚಾರಣಾಧಿಕಾರಿಯವರ ದಿನಾಂಕ: 19.05.2004ರ ವಿಚಾರಣಾ ವರದಿಯನ್ನೊಳಗೊಂಡ ಪ.ಸಂಖ್ಯೆ: ಶಿಸ್ತು ಪ್ರಕರಣ: 1: 2000-2001.

(3) ದಿನಾಂಕ: 19.10.2004ರ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ: 93: ಎಡಿಇ 96.

(4) ಶ್ರೀ ಆರ್.ಎಸ್. ಪಡವಳಕರ್ ರವರ ದಿನಾಂಕ: 08.11.2004ರ ಲಿಖಿತ ಸಮಜಾಯಿಷಿ.

**ಪ್ರಸ್ತಾವನೆ:**

ಶ್ರೀ ಆರ್.ಎಸ್. ಪಡವಳಕರ್, ತಹಶೀಲ್ದಾರ್, ಇವರು ನಿಯೋಜನೆಯ ಮೇಲೆ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಜಿಲ್ಲಾ ಕೈಗಾರಿಕಾ ಕೇಂದ್ರ, ಉಪವಿಭಾಗ, ಸಾಗರ ಇಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ 1994-95ನೇ ಸಾಲಿನಲ್ಲಿ ವಿಶ್ವ ಯೋಜನೆ ಅಡಿಯಲ್ಲಿ ಶಿಕಾರಿಪುರ ತಾಲ್ಲೂಕಿನ ಹೊಲಿಗೆ ತರಬೇತಿ ಕೇಂದ್ರದಲ್ಲಿ ತಯಾರಿಸಿದ್ದ ಸಿದ್ಧ ವಸ್ತುಗಳನ್ನು ಹರಾಜು ಮಾಡಿ ಬಂದ ಹಣವನ್ನು ಸರ್ಕಾರಕ್ಕೆ ಜಮೆ ಮಾಡದೆ, ಹಣ ದುರುಪಯೋಗ ಮಾಡಿದ ಕರ್ತವ್ಯಲೋಪದ ಮೇಲೆ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲು ಸಾಗರ ಉಪ ವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ದಿನಾಂಕ: 06.03.2000ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಮೇಲೆ ಕ್ರ.ಸಂ.(2)ರ ದಿನಾಂಕ: 19.05.2004ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ ಆಪಾದಿತ ಅಧಿಕಾರಿಯ ವಿರುದ್ಧದ ಎಲ್ಲಾ ಆರೋಪಗಳು ಸಾಬೀತಾಗಿರುವುದಾಗಿ ಹಾಗೂ ಹಣ ದುರುಪಯೋಗವಾದ ಶೇ.50ರಷ್ಟು ಹಣಕ್ಕೆ ಮಾತ್ರ ಜವಾಬ್ದಾರರೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಶ್ರೀ ಆರ್.ಎಸ್. ಪಡವಳಕರ್, ಹಿಂದಿನ ಸಹಾಯಕ ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಉಪ ವಿಭಾಗ, ಸಾಗರ (ಹಾಲಿ ನಿವೃತ್ತ ತಹಶೀಲ್ದಾರ್) ಇವರ ವಿರುದ್ಧದ ಎಲ್ಲಾ ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣೆಯಿಂದ ತಿಳಿದು ಬಂದ ಕಾರಣ ಹಾಗೂ ಸದರಿ ಆಪಾದಿತ ಅಧಿಕಾರಿ ಈಗ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅನ್ವಯ ಇವರಿಗೆ ದಂಡನೆ ವಿಧಿಸಲು ಅವಕಾಶವಿಲ್ಲದ ಕಾರಣ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ರಡಿಯಲ್ಲಿ ಇವರ ಡಿಸಿಆರ್‌ಜಿ ಮೊತ್ತದಲ್ಲಿನ ರೂ. 34,535 (ಮೂವತ್ತಾನಾಲ್ಕು ಸಾವಿರದ ಐದುನೂರ ಮೂವತ್ತೈದು ಮಾತ್ರ) ಅನ್ನು ಒಂದೇ ಕಂತಿನಲ್ಲಿ ಹಿಡಿದುಕೊಳ್ಳುವ ಹಾಗೂ 1996ರ ಜನವರಿ ತಿಂಗಳಿಂದ ಈ ಹಣ ಕಟಾಯಿಸುವವರೆಗಿನ ಅವಧಿಗೆ ರೂ.34,535/-ರ ಮೇಲೆ ಶೇ.8ರಷ್ಟು ಬಡ್ಡಿ ವಿಧಿಸಿ ಕಟಾಯಿಸುವ ದಂಡನೆಯನ್ನು ವಿಧಿಸುವ ಬಗ್ಗೆ ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ದಿನಾಂಕ: 19.10.2004ರಲ್ಲಿ ಎರಡನೇ ಕಾರಣ ಕೇಳುವ ನೋಟೀಸು ನೀಡಲಾಗಿತ್ತು. ಅದಕ್ಕನುಗುಣವಾಗಿ ಆರೋಪಿತ ಅಧಿಕಾರಿಯು ಮೇಲೆ ಕ್ರ.ಸಂ.(4)ರಲ್ಲಿ ಓದಲಾದ ದಿನಾಂಕ: 08.11.2004ರ ಲಿಖಿತ ಸಮಜಾಯಿಷಿಯಲ್ಲಿ ಇವರಿಗೆ ವಿಧಿಸಲು ಉದ್ದೇಶಿಸಿರುವ ದಂಡನೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 93 ಎಡಿಇ 96, ಬೆಂಗಳೂರು, ದಿನಾಂಕ: 13ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್.ಎಸ್. ಪಡವಳಕರ್, ಹಿಂದಿನ ಸಹಾಯಕ ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಜಿಲ್ಲಾ ಕೈಗಾರಿಕಾ ಕೇಂದ್ರ, ಉಪವಿಭಾಗ, ಸಾಗರ (ಹಾಲಿ ನಿವೃತ್ತ ತಹಶೀಲ್ದಾರ್) ಇವರ ಡಿಸಿಆರ್‌ಜಿ ಮೊತ್ತದಲ್ಲಿ ರೂ. 34,535 (ಮೂವತ್ತಾನಾಲ್ಕು ಸಾವಿರದ ಐದುನೂರ ಮೂವತ್ತೈದು ಮಾತ್ರ) ಗಳನ್ನು ಒಂದೇ ಕಂತಿನಲ್ಲಿ ಹಿಡಿದುಕೊಳ್ಳುವಂತೆ ಹಾಗೂ 1996ರ ಜನವರಿ ತಿಂಗಳಿಂದ ಈ ಹಣ ಕಟಾಯಿಸುವವರೆಗಿನ ಅವಧಿಗೆ ರೂ.34,535/-ರ ಮೇಲೆ ಶೇ.8ರಷ್ಟು ಬಡ್ಡಿ ವಿಧಿಸಿ ಕಟಾಯಿಸಲು ಹಾಗೂ ಇವರ ಪಿಂಚಣಿಯಲ್ಲಿ ಮಾಹೆಯಾನ ರೂ.300/- (ಮೂನ್ನೂರು ರೂಪಾಯಿಗಳು ಮಾತ್ರ) ಗಳನ್ನು ಮೂರು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 26.10.2005ರ ಪತ್ರ ಸಂಖ್ಯೆ: ಪಿಎಸ್‌ಸಿ 112 ಸಿಎಎಸ್ 05ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 452

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

## COMMERCE AND INDUSTRIES SECRETARIAT

**Subject:** Transfer of Mining lease No.2175 held by Shri H. Noor Ahmed in favour of M/s Tumkur Minerals Pvt. Ltd.

**Read:** Letter No DMG/ 04/ TRN/ 2005/ 1188 dated: 29.07.2005 of the Director of Mines and Geology, Bangalore.

**Preamble:**

The Director of Mines and Geology, Bangalore in his letter read above has stated that Shri H. Noor Ahmed is holding Mining Lease No.2175 for Manganese m Iron ore and Clay, over an area of 160-00 acres in Sy.No. 37 and 41 of Sondenahalli village, Chikkanayakanahalli taluk, Tumkur district for a period of 20 years w.e.f. 11.11.1993. The lessee has requested to Transfer of Mining Lease No. 2175 in favour of M/s Tumkur Minerals Pvt. Ltd., for systematic, mechanized mining and marketing of ore. M/s Tumkur Minerals Pvt. Ltd., have also agreed to take over the Mining lease on transfer as per Rule 37 of M.C. Rules, 1960 subject to terms and conditions of mining lease. Since both the applicants have fulfilled all the requirements as per M.C. Rules, 1960, the Director of Mines and Geology has recommended to the Government for transfer of Mining Lease No.2175 held by Shri H. Noor Ahmed in favour of M/s Tumkur Minerals Pvt. Ltd., as per rule 37 of M.C. Rules, 1960.

The proposal has been examined.

**Government Order No. CI.187: MMM. 2005, Bangalore, Dated: 10th March, 2006**

In the circumstances explained in the preamble, the Government are pleased to accord sanction for transfer of Mining Lease No.2175 held by Shri H. Noor Ahmed in Sy.No.37 and 41 of Sondenahalli village of Chikkanayakanahalli taluk, Tumkur district over an area of 160-00 acres in favour of M/s Tumkur Minerals Pvt.Ltd., for the unexpired period of the lease i.e., up to 10.11.2013 under Rule 37(1)(a) of MCR, 1960, subject to the conditions that the transferee shall accept all the conditions and liabilities which the transferor was having in respect of the said mining lease.

By Order and in the Name of the Governor of Karnataka,

**S.S. PATTANASHETTI**

PR-453

Additional secretary to Government (Mines),
Commerce & INdustries Department.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವಾಗೀಶ್ ವಿ. ಹಿರೇಮಠ್ ಮತ್ತು ಶ್ರೀ ಇ.ಎಂ. ಬಣಕರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಕಾಲಬದ್ಧ ಮುಂಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** (1) ಅಧಿಸೂಚನೆ ಸಂಖ್ಯೆ: ಎಫ್‌ಡಿ 105 ಎಸ್‌ಆರ್‌ಪಿ (ಸಿಎಸ್‌ಸಿ) 82 ದಿನಾಂಕ: 08.06.1983.

(2) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 60 ಎಸ್‌ಆರ್‌ಪಿ 84 ದಿನಾಂಕ: 23.08.1984.

(3) ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 74 ಎಸ್‌ಆರ್‌ಪಿ 84 ದಿನಾಂಕ: 15.10.1984.

(4) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 60 ಎಸ್‌ಆರ್‌ಪಿ 84 ದಿನಾಂಕ: 03.09.1985.

(5) ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಪತ್ರ ಸಂಖ್ಯೆ ಡಿಪಿಎನ್: ಸಿಶಾ-1/ 71/ 2000-01 ದಿನಾಂಕ: 20.01.2004.

(6) ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಪತ್ರ ಸಂಖ್ಯೆ ಡಿಪಿಎನ್: ಸಿಶಾ-1/ 72/ 2000-01 ದಿನಾಂಕ: 17.01.2002.

**ಪ್ರಸ್ತಾವನೆ:**

ಮೇಲೆ (5) ಮತ್ತು (6)ರಲ್ಲಿ ಓದಲಾಗಿರುವ ಕ್ರಮವಾಗಿ ದಿನಾಂಕ: 20.01.2004 ಮತ್ತು ದಿನಾಂಕ: 17.01.2002ರ ಪ್ರಸ್ತಾವನೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ನೇರ ನೇಮಕಾತಿ ಮೂಲಕ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಾತಿ ಹೊಂದಿ, ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ 10 ವರ್ಷ ಅವಧಿಯ ನಿರಂತರ ಸೇವೆಯನ್ನು ಸಲ್ಲಿಸಿರುವ ಈ ಕೆಳಕಂಡ ತಃಖ್ತೆಯ ಅಂಕಣ 2ರಲ್ಲಿ ಸೂಚಿಸಿರುವ ಸಹಾಯಕ ಸರ್ಕಾರಿ ಅಭಿಯೋಜಕರಿಗೆ ಮೇಲೆ 1 ರಿಂದ 4ರ ವರೆಗೆ ಓದಲಾಗಿರುವ ಸರ್ಕಾರಿ ಆದೇಶಗಳ ಅನುಸಾರ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯ ವೇತನ ಶ್ರೇಣಿ ರೂ.6000-150-7200-8800-260-10880-320-11200ರ ಆಯ್ಕೆಕಾಲಿಕ ವೇತನ ಶ್ರೇಣಿ ರೂ.6300-150-7200-200-8800-260-10880-320-11840ಕ್ಕೆ ದಿನಾಂಕ: 04.08.1999 ರಿಂದ ಜಾರಿಗೆ ಬರುವಂತೆ ಕಾಲಬದ್ಧ ಮುಂಬಡ್ತಿಯನ್ನು ಮಂಜೂರು ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಅಧಿಕಾರಿಯವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಸೇವೆ ಸಲ್ಲಿಸಿದ 10 ವರ್ಷಗಳ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆ/ ಅಸಾಧಾರಣ ರಜೆ ಪಡೆದಿರುವುದಿಲ್ಲ. ನಿಗದಿತ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿರುತ್ತಾರೆ./ ವಿನಾಯಿತಿ ಪಡೆದಿರುತ್ತಾರೆ. ಮತ್ತು ಪರೀಕ್ಷಾ ಪೂರ್ವಾವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿರುತ್ತಾರೆ. ಇವರ ಕಾರ್ಯನಿರ್ವಹಣಾ ಅವಧಿಯಲ್ಲಿ ಯಾವುದೇ ಪ್ರತಿಕೂಲ ಷರ ಇರುವುದಿಲ್ಲ ಮತ್ತು ಮುಂಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಆದಕಾರಣ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 342 ಪಿಪಿಇ 2005, ಬೆಂಗಳೂರು, ದಿನಾಂಕ: 22ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ನಿರಂತರ 10 ವರ್ಷಗಳ ಸೇವೆಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿರುವ ಈ ಕೆಳಕಂಡ ತಃಖ್ತೆಯ ಅಂಕಣ ಎರಡರಲ್ಲಿ ನಮೂದಿಸಿರುವ ಸಹಾಯಕ ಸರ್ಕಾರಿ ಅಭಿಯೋಕರಿಗೆ (ಪ್ರಸ್ತುತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು) ಅಂಕಣ 4ರಲ್ಲಿ ಸೂಚಿಸಿರುವ ದಿನಾಂಕದಿಂದ ಜಾರಿಗೆ ಬರುವಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ.6000-150-7200-200-8800-260-10880-320-11200ರ ಆಯ್ಕೆಕಾಲಿಕ ವೇತನ ಶ್ರೇಣಿಯಾದ ರೂ.6300-150-7200-200-8800-260-10880-320-11840ಕ್ಕೆ ಕಾಲಬದ್ಧ ಮುಂಬಡ್ತಿಯನ್ನು ನೀಡಿ ಅವರ ವೇತನವನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 42(ಬಿ) ಅನುಸಾರ ವೇತನ ನಿಗದಿಗೊಳಿಸಲು ಮಂಜೂರಾತಿಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ಸಹಾಯಕ ಸರ್ಕಾರಿ ಅಭಿಯೋಜಕರ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ನೇರ ನೇಮಕಾತಿ ಮೂಲಕ ಆಯ್ಕೆಗೊಂಡು ಕರ್ತವ್ಯಕ್ಕೆ ಹಾಜರಾದ ದಿನಾಂಕ | ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ 10 ವರ್ಷ ಸೇವೆ ಪೂರ್ಣಗೊಳಿಸಿದ ದಿನಾಂಕ | ಷರಾ |
|---|---|---|---|---|
| 1. | ಶ್ರೀ ವಾಗೀಶ್ ವಿ. ಹಿರೇಮಠ್, ಸಹಾಯಕ ಸರ್ಕಾರಿ ಅಭಿಯೋಜಕರು (ಪ್ರಸ್ತುತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು) | 04.08.1989 | 04.08.1999 | |
| 2. | ಶ್ರೀ ಇ.ಎಂ. ಬಣಕಾರ್, ಸಹಾಯಕ ಸರ್ಕಾರಿ ಅಭಿಯೋಜಕರು, (ಪ್ರಸ್ತುತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು) | 04.08.1989 | 04.08.1999 | ಸದರಿಯವರು ದಿನಾಂಕ: 10.08.1998ರಂದು ಅಂದರೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ 10 ವರ್ಷ ಸೇವೆ ಪೂರ್ಣಗೊಳಿಸುವ ಮೊದಲೇ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ಹೊಂದಿರುತ್ತಾರೆ. ಆದರೆ 10 ವರ್ಷ ಸೇವೆ ಪೂರ್ಣಗೊಳ್ಳುವವರೆಗೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯ ವೇತನ ಶ್ರೇಣಿಯಲ್ಲೇ ವೇತನ ಪಡೆಯುವ ಬಗ್ಗೆ ಮೇಲೆ 4ರಲ್ಲಿ ಓದಲಾಗಿರುವ ದಿನಾಂಕ: 03.09.1985ರ ಸರ್ಕಾರಿ ಆದೇಶದ ಅನುಸಾರ ಅಭಿಮತವನ್ನು ನಿಯಮಾನುಸಾರ ಸಕಾಲದಲ್ಲಿ ಸಲ್ಲಿಸಿರುತ್ತಾರೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 454

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಪ್ರದೇಶಕ್ಕೆ "ರಚನಾ ನಕ್ಷೆ"ಗೆ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ನಅಇ 51 ಬಿಎಂಆರ್ 2002 ದಿನಾಂಕ: 21.09.2005.

(2) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಮಹಾನಗರ ಆಯುಕ್ತರವರ ಪತ್ರ ಸಂಖ್ಯೆ: ಬಿಎಂಆರ್‌ಡಿಎ/ ಎಂಸಿ/ ಪಿಎಸ್/ 7/ 2003 ದಿನಾಂಕ: 13.05.2003.

(3) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಮಹಾನಗರ ಆಯುಕ್ತರವರ ಪತ್ರ ಸಂಖ್ಯೆ: ಬಿಎಂಆರ್‌ಡಿಎ/ ಎಲ್‌ಎಓ/ 26/ 2004-05 ದಿನಾಂಕ: 20.01.2006.

ಮೇಲೆ (1)ರಲ್ಲಿ ಓದಲಾದ ದಿನಾಂಕ: 21.09.2005ರ ಆದೇಶದಲ್ಲಿ ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶದ ಯೋಜಿತ ಬೆಳವಣಿಗಾಗಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಸಿದ್ಧಪಡಿಸಿರುವ ರಚನಾ ನಕ್ಷೆಗೆ ಕೆಲವು ಅಂಶಗಳನ್ನು ಅಳವಡಿಸಿ ಮಂಜೂರಾತಿಯನ್ನು ನೀಡಿತ್ತು.

ಮೇಲೆ (2) ಮತ್ತು (3)ರಲ್ಲಿ ಓದಲಾದ ಪತ್ರಗಳಲ್ಲಿ ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರು ಸ್ಥಳೀಯವಾಗಿ ಬೆಳೆದ ವ್ಯವಸಾಯೋತ್ಪನ್ನ ಸಂಸ್ಕರಣೆಗಾಗಿ IZ ವಲಯದಲ್ಲಿ ಅವಕಾಶವನ್ನು ಕಲ್ಪಿಸಿ ಈ ಕೆಳಕಂಡ ಚಟುವಟಿಕೆಗಳನ್ನು ಸೇರಿಸಲು ಸರ್ಕಾರವನ್ನು ಕೋರಿರುತ್ತಾರೆ.

(ಅ) ಅಕ್ಕಿ ಗಿರಣಿಗಳು ಮತ್ತು

(ಆ) ಸ್ಥಳೀಯವಾಗಿ ದೊರೆಯುವ ಕೃಷಿ ಉತ್ಪನ್ನಗಳ ಕಚ್ಚಾವಸ್ತುಗಳ ಸಂಸ್ಕರಣೆಗಾಗಿ ಕೃಷಿಕ ಸಂಸ್ಕರಣಾ ಘಟಕಗಳು.

ಸರ್ಕಾರವು ಮಹಾನಗರ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 51 ಬಿಎಂಆರ್ 2002, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ನಅಇ 51 ಬಿಎಂಆರ್ 2002, ದಿನಾಂಕ: 21.09.2005ರ

"(ಅ) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ತಯಾರಿಸಿರುವ ರಚನಾ ನಕ್ಷೆಯಲ್ಲಿ ಬರುವ ಇಂಟರ್‌ಸ್ಟಿಷಿಯಲ್ ವಲಯದಲ್ಲಿ (IZ) ವಿಶೇಷ ಸಂದರ್ಭದಲ್ಲಿ ಅನುಮತಿಸಬಹುದಾದ ಉಪಯೋಗಗಳು" ರ ಅಡಿ ವಿಶೇಷ ಸಂದರ್ಭದಲ್ಲಿ ಅನುಮತಿಸಬಹುದಾದ ಉಪಯೋಗಗಳು ಜೊತೆಗೆ ಅರಣ್ಯ, ಜೀವಶಾಸ್ತ್ರ ಮತ್ತು ಪರಿಸರ ಇಲಾಖೆಯು ತಿಪ್ಪಗೊಂಡನಹಳ್ಳಿ ಜಲಾನಯನ ರಕ್ಷಿತ ಪ್ರದೇಶಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಎಫ್‌ಇಇ 215 ಇಎನ್‌ವಿ 2000 ದಿನಾಂಕ: 18.11.2003ರಲ್ಲಿ ಒಳಗೊಂಡಿರುವ ಇಂಟರ್‌ಸ್ಟಿಷಿಯಲ್ ವಲಯ (IZ) ಹೊರತುಪಡಿಸಿ, ಸಂಬಂಧಿಸಿದಂತೆ ಈ ಕೆಳಕಂಡ ಅಂಶಗಳನ್ನು ಅಳವಡಿಸಿ ಆದೇಶಿಸಿದೆ:

"ಅಕ್ಕಿ ಗಿರಣಿಗಳು; ಮತ್ತು

ಕೃಷಿ ಉತ್ಪಾದನಾ ಸಂಸ್ಕರಣೆ ಹಾಗೂ ಸಂಬಂಧಿತ ಘಟಕಗಳು (ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆಗ್ರೋ ಫುಡ್ ಪ್ರೊಸೆಸಿಂಗ್ (Agro Food Processing ಕೈಗಾರಿಕಾ ನೀತಿ, 1999ರಲ್ಲಿ ವ್ಯಾಖ್ಯಾನಿಸಿರುವಂತೆ)".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಪಿ.ಆರ್. 455

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ವಿಷಯ :** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಪ್ರದೇಶಕ್ಕೆ ತಯಾರಿಸಿರುವ ರಚನಾ ನಕ್ಷೆಯಲ್ಲಿ IZ-6ರ ವಲಯದಲ್ಲಿ ಬರುವ ಆನೇಕಲ್ ತಾಲ್ಲೂಕು, ಬಿದಿರುಗುಪ್ಪೆ ಮತ್ತು ಅರೆನೂರು ಗ್ರಾಮಗಳನ್ನು APZ-5ಕ್ಕೆ ಸೇರಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ: ನಅಇ 51 ಬಿಎಂಆರ್ 2002 ದಿನಾಂಕ: 21.09.2005.

(2) ಸರ್ಕಾರಿ ಆದೇಶ ಸಂಖ್ಯೆ: ನಅಇ 51 ಬಿಎಂಆರ್ 2002 ದಿನಾಂಕ: 25.02.2006.

(3) ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರಿಂದ ಸ್ವೀಕರಿಸಿರುವ ಪತ್ರದ ಸಂಖ್ಯೆ: ಬಿಎಂಆರ್‌ಡಿಎ/ ಎಲ್‌ಎಓ/ 151/ 2005-06 ದಿನಾಂಕ: 20.01.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 21.09.2005ರ ಆದೇಶದಲ್ಲಿ ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶದ ಯೋಜಿತ ಬೆಳವಣಿಗಾಗಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಸಿದ್ಧಪಡಿಸಿರುವ ರಚನಾ ನಕ್ಷೆಗೆ ಕೆಲವು ಅಂಶಗಳನ್ನು ಅಳವಡಿಸಿ ಮಂಜೂರಾತಿಯನ್ನು ನೀಡಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 25.02.2006ರ ಆದೇಶದಲ್ಲಿ ಅಕ್ಕಿ ಗಿರಣಿಗಳು ಮತ್ತು ಕೃಷಿ ಉತ್ಪಾದನಾ ಸಂಸ್ಕರಣೆ ಹಾಗೂ ಸಂಬಂಧಿತ ಘಟಕಗಳನ್ನು (ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆಗ್ರೋ ಫುಡ್ ಪ್ರೊಸೆಸಿಂಗ್ (Agro Food Processing) ಕೈಗಾರಿಕಾ ನೀತಿ, 1999ರಲ್ಲಿ ವ್ಯಾಖ್ಯಾನಿಸಿರುವಂತೆ) ವಿಶೇಷ ಸಂದರ್ಭಗಳಲ್ಲಿ ಅನುಮತಿಸಬಹುದಾದ ಪ್ರಕರಣಗಳೆಂದು ಪರಿಗಣಿಸಿ ಅನುಮತಿಸಲು ಆದೇಶಿಸಿದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 20.01.2006ರ ಪತ್ರದಲ್ಲಿ, ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರು ಕರಡು ರಚನಾ ನಕ್ಷೆಗೆ ಅಂತಿಮವಾಗಿ ಅನುಮೋದನೆ ನೀಡುವಾಗ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಅರೆನೂರು ಮತ್ತು ಬಿದಿರುಗುಪ್ಪೆ ಗ್ರಾಮಗಳ ಸುತ್ತಲೂ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದಿತ ವಸತಿ ವಿನ್ಯಾಸಗಳಿರುವುದರಿಂದ ಪ್ರಶ್ನಿತ ಗ್ರಾಮಗಳನ್ನು ದ್ವೀಪದಂತೆ ಹೊರತುಪಡಿಸುವ ಬದಲು APZ-5ರ ಪಟ್ಟಿಗೆ ಸೇರಿಸಲು ಸೂಕ್ತ ಎಂದು ಕೋರಿರುತ್ತಾರೆ.

ಮಹಾನಗರ ಆಯುಕ್ತರ ಪ್ರಸ್ತಾವನೆಯನ್ನು ಪರಿಗಣಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 196 ಬಿಎಂಆರ್ 2005, ಬೆಂಗಳೂರು, ದಿನಾಂಕ: 3ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಅರೆನೂರು ಮತ್ತು ಬಿದಿರುಗುಪ್ಪೆ ಗ್ರಾಮಗಳನ್ನು ಹಾಲಿ ಇರುವ IZ-6ರ ವಲಯದಿಂದ ಬೇರ್ಪಡಿಸಿ APZ-5ರ ವಲಯಕ್ಕೆ ಸೇರಿಸಿ ಸರ್ಕಾರ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಪಿ.ಆರ್. 456

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್. ಕೃಷ್ಣಪ್ಪ, ಡಿವೈ.ಎಸ್.ಪಿ, ದೊಡ್ಡಬಳ್ಳಾಪುರ ಉಪ ವಿಭಾಗ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ: 15.03.2006ರ ಕರ್ನಾಟಕ ಲೋಕಾಯುಕ್ತ ಕಛೇರಿ ಪತ್ರ ಸಂಖ್ಯೆ:LOK/ INV(G)BD/ Cr.4/ 2006/ BLR.

**ಸರ್ಕಾರದ ಆದೇಶ ಸಂಖ್ಯೆ: ಒಇ 78 ಪೊಸಿಪ 2006, ಬೆಂಗಳೂರು, ದಿನಾಂಕ: 16ನೇ ಮಾರ್ಚ್, 2006**

ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಎನ್. ಕೃಷ್ಣಪ್ಪ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ದೊಡ್ಡಬಳ್ಳಾಪುರ ಉಪ ವಿಭಾಗ ರವರು ತಮ್ಮ ಆದಾಯಕ್ಕಿಂತ ಹೆಚ್ಚಿನ ಮೌಲ್ಯದ ಆಸ್ತಿ-ಪಾಸ್ತಿಗಳನ್ನು ಹೊಂದಿರುವುದಾಗಿ ಆಪಾದನೆ ಹೊರಿಸಿ, ಮೇಲ್ನೋಟಕ್ಕೆ ಈ ಆಪಾದನೆ ದೃಢಪಟ್ಟಿರುವುದು ಕಂಡುಬಂದ ಕಾರಣ, ಇವರನ್ನು ದಿನಾಂಕ: 14.03.2006ರಂದು ದಸ್ತಗಿರಿ ಮಾಡಿ, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಜಿಲ್ಲೆ ಇವರ ಮುಂದೆ ಹಾಜರುಪಡಿಸಿರುವುದಾಗಿ

ತಿಳಿಸುತ್ತಾ, ಶ್ರೀ ಎನ್. ಕೃಷ್ಣಪ್ಪ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ದೊಡ್ಡಬಳ್ಳಾಪುರ ಉಪವಿಭಾಗ, ಈ ಆಪಾದಿತ ಸರ್ಕಾರಿ ನೌಕರರ ವಿರುದ್ಧ ಸೂಕ್ತ ಶಿಸ್ತಿನ ಕ್ರಮವನ್ನು ಜರುಗಿಸುವಂತೆ ಕೋರಿರುವುದರಿಂದಲೂ,

ಈ ಸಂಬಂಧ ಕರ್ನಾಟಕ ಲೋಕಾಯುಕ್ತ ರವರ ಪ್ರಾಥಮಿಕ ವರದಿಯಲ್ಲಿ ಶ್ರೀ ಎನ್. ಕೃಷ್ಣಪ್ಪ, ಡಿವೈ.ಎಸ್.ಪಿ. ದೊಡ್ಡಬಳ್ಳಾಪುರ ಉಪವಿಭಾಗ ರವರು ತಮ್ಮ ಆದಾಯಕ್ಕಿಂತ ಹೆಚ್ಚಿನ ಆಸ್ತಿ-ಪಾಸ್ತಿಗಳನ್ನು ಹೊಂದಿರುವುದು ದೃಢಪಟ್ಟಿರುವುದರಿಂದ ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಹಾಗೂ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದದ ಹಾಗೂ ದಾಖಲೆ/ ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಗಳು, 1965ರ ನಿಯಮ 5(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎನ್. ಕೃಷ್ಣಪ್ಪ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ದೊಡ್ಡಬಳ್ಳಾಪುರ ಉಪವಿಭಾಗ, ಬೆಂಗಳೂರು ಜಿಲ್ಲೆ ಇವರ ವಿರುದ್ಧ ಶಿಸ್ತುಕ್ರಮವನ್ನು ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎನ್.ಕೃಷ್ಣಪ್ಪ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎನ್.ಕೃಷ್ಣಪ್ಪ, ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ.

ಪಿ.ಆರ್. 457

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2005-06ನೇ ಸಾಲಿನ ಅಂತಿಮ ಕಂತಿನ ಶಾಸನಬದ್ಧ ಅನುದಾನವನ್ನು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 237 ಗ್ರಾಪಂಅ 05 ದಿನಾಂಕ: 17.05.2005.

(2) ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 237 ಗ್ರಾಪಂಅ 05 ದಿನಾಂಕ: 31.08.2005.

(3) ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 237 ಗ್ರಾಪಂಅ 05 ದಿನಾಂಕ: 21.10.2005.

(4) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 2052 ವೆಚ್ಚ 6/2005, ದಿನಾಂಕ:14.12.2005.

(5) ಆರ್ಥಿಕ ಇಲಾಖೆ ಅ.ಟಿ. ಸಂಖ್ಯೆ: ಆಇ 46 ವೆಚ್ಚ 6/06 ದಿನಾಂಕ: 15.03.2006.

**ಪ್ರಸ್ತಾವನೆ:**

2005-06ನೇ ಸಾಲಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಶಾಸನಬದ್ಧ ಅನುದಾನವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2515-00-198-1-07 (ಯೋಜನೆ) ಅಡಿ ಒಟ್ಟಾರೆ 28265 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿತ್ತು. ಈ ಅನುದಾನದಿಂದ ಪ್ರತಿ ಗ್ರಾಮ ಪಂಚಾಯತಿಗೆ ತಲಾ 5.00 ಲಕ್ಷ ರೂಪಾಯಿಗಳು ಲಭ್ಯವಾಗುತ್ತದೆ. ಈವರೆವಿಗೂ ಉಲ್ಲೇಖ (1), (2) ಮತ್ತು (3)ರಲ್ಲಿ ತಿಳಿಸಿರುವ ಸರ್ಕಾರದ ಆದೇಶಗಳಲ್ಲಿ ತ್ರೈಮಾಸಿಕವಾಗಿ ತಲಾ 1.25 ಲಕ್ಷ ರೂಪಾಯಿಗಳಂತೆ ಒಟ್ಟು 3.75 ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡಿ ಗ್ರಾಮ ಪಂಚಾಯತಿಗಳ ಸ್ಥಳೀಯ ಬ್ಯಾಂಕ್ ಖಾತೆಗಳಿಗೆ ಜಮಾ ಮಾಡಲಾಗಿರುತ್ತದೆ.

2005-06ನೇ ಸಾಲಿನ ನಾಲ್ಕನೇ ಕಂತಿನ ಅನುದಾನ ಒಟ್ಟು 70.70 ಕೋಟಿ ರೂಪಾಯಿಗಳನ್ನು ಆರ್ಥಿಕ ಇಲಾಖೆಯು ಉಲ್ಲೇಖ (4) ಹಾಗೂ (5)ರಲ್ಲಿ ತಿಳಿಸಿರುವ ಅನಧಿಕೃತ ಟಿಪ್ಪಣಿಯಲ್ಲಿ ಬಿಡುಗಡೆ ಮಾಡಿರುತ್ತದೆ. ಈ ಅನುದಾನವನ್ನು ರಾಜ್ಯದ ಎಲ್ಲಾ ಗ್ರಾಮಪಂಚಾಯತಿಗಳಿಗೆ ಸಮನಾಗಿ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಪ್ರತಿ ಗ್ರಾಮ ಪಂಚಾಯಿತಿಗೆ ಸರಾಸರಿ ರೂ.1.25 ಲಕ್ಷ ಲಭ್ಯವಾಗಲಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 237 ಗ್ರಾಪಂಅ 2005, ಬೆಂಗಳೂರು, ದಿನಾಂಕ: 16ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2005-06ನೇ ಸಾಲಿನ ಶಾಸನಬದ್ಧ ಅನುದಾನದ 4ನೇ ಕಂತಿನ ಮೊತ್ತ 70.70 ಕೋಟಿ (ಎಪ್ಪತ್ತು ಕೋಟಿ ಎಪ್ಪತ್ತು ಲಕ್ಷ) ರೂಪಾಯಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2515-00-198-1'-07 (ಯೋಜನೆ) ಅಡಿ ಆಯವ್ಯಯ ಅವಕಾಶದಲ್ಲಿ ಭರಿಸಲಾಗಿದೆ. ಈ ಅನುದಾನದ ಮೊತ್ತವನ್ನು ಫೇಯಿಸ್ ರಶೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳ ಸ್ಥಳೀಯ ಬ್ಯಾಂಕ್ ಖಾತೆಗೆ ಜಮಾ ಮಾಡಲು ಆದೇಶಿಸಿದೆ. ಈ ಅನುದಾನವನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಕಲಂ 206ರ ಅಡಿಯಲ್ಲಿ ವಿವರಿಸಿರುವ ಉದ್ದೇಶಗಳಿಗೆ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 46 ವೆಚ್ಚ-6 2005, ದಿನಾಂಕ: 15.03.2006ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 458